# ಶ್ರೀಕ್ಷೇತ್ರ ಕಬ್ಬತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ


ನಿಬಂಧಕಾರರು

**ಧರಣೇಶ್.ಎ.ಡಿ.**

ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಕನ್ನಡ ಉಪನ್ಯಾಸಕರು
ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ
ಚಾಮರಾಜನಗರ







**ಕನ್ನಡ ವಿಶ್ವವಿದ್ಯಾಲಯ, ಹಂಪಿ**

೨೦೦೮-೦೯

# ಶ್ರೀಕ್ಷೇತ್ರ ಕಬ್ಬತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

ನಿಬಂಧಕಾರರು

**ಧರಣೇಶ್.ಎ.ಡಿ.**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು



ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**
ಕನ್ನಡ ಉಪನ್ಯಾಸಕರು
ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ
ಚಾಮರಾಜನಗರ



ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮-೦೯

## ದೃಢೀಕರಣಪತ್ರ

೨೦೦೮–೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KTM/K-0122ರ ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಧರಣೇಶ್.ಎ.ಡಿ. ಅವರು ನನ್ನ ಮಾರ್ಗದರ್ಶನದಲ್ಲಿ "**ಶ್ರೀಕ್ಷೇತ್ರ ಕಬ್ಬುತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ**" ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಮಹೇಶ್ವರಿ

**(ಡಾ. ಎನ್.ಮಹೇಶ್ವರಿ)**
ಕನ್ನಡ ಉಪನ್ಯಾಸಕರು
ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ
ಚಾಮರಾಜನಗರ

ಮೈಸೂರು
ದಿನಾಂಕ: 30-09-09

# ಅಭ್ಯರ್ಥಿಯ ಘೋಷಣಾಪತ್ರ

**"ಶ್ರೀ ಕ್ಷೇತ್ರ ಕಬ್ಬತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KTM/K-0122ರ ವಿದ್ಯಾರ್ಥಿಯಾದ ನಾನು ೨೦೦೮–೦೯ನೇ ಸಾಲಿನ ಪರೀಕ್ಷೆಗಾಗಿ **ಡಾ. ಎನ್.ಮಹೇಶ್ವರಿ, ಉಪನ್ಯಾಸಕರು, ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ, ಚಾಮರಾಜನಗರ** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು

ದಿನಾಂಕ : 30-09-09

**(ಧರಣೇಶ್.ಎ.ಡಿ.)**
೨೦೦೮–೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪ ರಿ ವಿ ಡಿ



****

## ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಾನವ ಬದುಕಿನ ಹಲವು ಮುಖಗಳನ್ನು ಕುರಿತು ಅನೇಕ ಶಾಸ್ತ್ರಗಳು ಅಧ್ಯಯನ ನಡೆಸುತ್ತಿವೆ. ಮಾನವ ಶಾಸ್ತ್ರ ಮಾನವನಿಗೆ ಸಂಬಂಧಿಸಿದ ಸಮಗ್ರ ವಿಷಯಗಳನ್ನು ಒಳಗೊಂಡಿದೆ. ಮಾನವನ ಜೀವನದ ಇತಿಹಾಸದ ಅಧ್ಯಯನಕ್ಕೆ ಮೂಲ ಸಾಮಗ್ರಿಯನ್ನು ಜಾನಪದ ಒದಗಿಸುತ್ತದೆ. ಸಮಾಜ ವಿಜ್ಞಾನ ಮತ್ತು ಇತಿಹಾಸಗಳು ಸಾಮಾಜಿಕ ಇತಿಹಾಸವನ್ನು ಅಧ್ಯಯನ ಮಾಡುತ್ತಿವೆ. ಮಾನವ ಸಂಪ್ರದಾಯಗಳು ಹಿಂದಿನ ಜೀವನ ಮುಂತಾದವುಗಳನ್ನು ಜಾನಪದ ಅಧ್ಯಯನಕ್ಕೆ ಅಣಿಮಾಡಿಕೊಡುತ್ತದೆ. ಒಂದು ಸಂಸ್ಕೃತಿಯ ಅಧ್ಯಯನದಲ್ಲಿ ಬುಡಕಟ್ಟಿನ ಅಧ್ಯಯನದಷ್ಟೇ ನಗರ ಜೀವನದ ಅಧ್ಯಯನ ಹಾಗೆಯೇ ಒಂದು ಗ್ರಾಮದ ಅಧ್ಯಯನವೂ ಮುಖ್ಯವಾಗುತ್ತದೆ.

ದಿನನಿತ್ಯ ನಾವು ಹತ್ತಾರು ಹಳ್ಳಿ, ಸ್ಥಳಗಳ ಹೆಸರುಗಳನ್ನು ಹೇಳುತ್ತೇವೆ, ಕೇಳುತ್ತವೆ. ಆದರೆ ಆ ಹೆಸರುಗಳೆಲ್ಲಾ ಯಾಂತ್ರಿಕವಾಗಿ ಕಿವಿಯ ಮೇಲೆ ಶಾಬ್ದಿಕವಾಗಿ ಬಿದ್ದುಹೋಗಿ ಬಡವಾಗಿ ಬಿಡುತ್ತವೆ. ಯಾವುದೇ ಸ್ಥಳ ಸಮಗ್ರ ಸಂಗತಿಗಳ ಬಗ್ಗೆ ನಾವು ತಲೆ ಕೆಡಿಸಿಕೊಳ್ಳುವುದಿಲ್ಲ. ವೈಜ್ಞಾನಿಕವಾಗಿ ವಿಶ್ಲೇಷಿಸುವ ಗೊಡವೆಗೂ ಹೊಗುವುದಿಲ್ಲ. ಆದರೆ ಇಂದು ಆಧುನಿಕ ಜೀವನದ ವೈಜ್ಞಾನಿಕ ಮತ್ತು ವೈಚಾರಿಕ ನೆಲೆಯ ಕಂಪ್ಯೂಟರ್ ಯುಗದ ಬೆಳವಣಿಗೆಯಲ್ಲಿ ಗ್ರಾಮ ಕೇಂದ್ರಿತ ಅಧ್ಯಯನವನ್ನು ಅಲಕ್ಷಿಸುವಂತಿಲ್ಲ. ಈ ಬಗ್ಗೆ ಗಮನಿಸಿ, ಗುರುತಿಸಿ ಗೋಚರಿಸುವ ಕಾರ್ಯ ತುರ್ತಾಗಿ ನಡೆಯಬೇಕಾದದ್ದು ಸೂಕ್ತವೆನಿಸುತ್ತದೆ. ಇತ್ತೀಚೆಗೆ ಇಂತಹ ಸ್ಥಳ ಕೇಂದ್ರಿತ ಅಧ್ಯಯನ, ಪ್ರಾದೇಶಿಕ ಅಧ್ಯಯನ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗುತ್ತಿದೆ. ಈ ಪ್ರಾದೇಶಿಕ ಪರಂಪರೆಯ ಸಮರ್ಪಕ ಅಧ್ಯಯನದಿಂದ ಐತಿಹಾಸಿಕ ಮಹತ್ವದ ದಾಖಲೆಗಳನ್ನು ಘಟನಾವಳಿಗಳನ್ನು ಸಾದರಪಡಿಸುವುದಕ್ಕೆ ಸಾಧ್ಯ. ಈ ಹಿನ್ನೆಲೆಯಲ್ಲಿ **"ಶ್ರೀಕ್ಷೇತ್ರ ಕಬ್ಬತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯವನ್ನು ಆಯ್ದುಕೊಳ್ಳಲಾಗಿದೆ. ಹಾಸನ ತಾಲ್ಲೂಕಿನ ಕಬ್ಬತ್ತಿ ಗ್ರಾಮವು ಐತಿಹಾಸಿಕ ಮಹತ್ವ, ಪ್ರಾಚೀನ ಪರಂಪರೆ ಹೊಂದಿರುವ ಗ್ರಾಮವಾಗಿದೆ.

ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ನಡೆಯಲೇ ಬೇಕಾದ ವಿಷಯಗಳಲ್ಲಿ ಸಾಂಸ್ಕೃತಿಕ ಅಧ್ಯಯನ ಅತ್ಯಂತ ಮುಖ್ಯವಾದುದು. ಈಚೆಗೆ ಪ್ರಾಚುರ್ಯಕ್ಕೆ ಬರುತ್ತಿರುವ ಸ್ಥಳ ಕೇಂದ್ರಿತ ಅಧ್ಯಯನ ಒಂದು ಮುಖ್ಯ ಶೈಕ್ಷಣಿಕ ಶಿಸ್ತು. ಈ ಅಧ್ಯಯನದ ಉದ್ದೇಶ

ಗ್ರಾಮದ ವೈಶಿಷ್ಟ್ಯವನ್ನು ಗುರುತಿಸಿ ಈ ಭಾಗದ ಸಮುದಾಯದ ಸಾಂಸ್ಕೃತಿಕ ಜೀವನದ ಬಗ್ಗೆ ಪರಿಚಯಿಸುವುದೇ ಆಗಿದೆ. ಕಬ್ಬತ್ತಿಯ ಸಾಂಸ್ಕೃತಿಕ ಅಧ್ಯಯನದಿಂದ ಅಪಾರ ಅನುಭವದ ವಿಷಯಗಳು ತಿಳಿದು ಬಂದಿವೆ. ಸಾಂಸ್ಕೃತಿಕ ಎಳೆಯನ್ನು, ಸೂಕ್ಷ್ಮ-ಸಂವೇದನೆಗಳನ್ನು ಅಭ್ಯಸಿಸಿ ಅವುಗಳಲ್ಲಿರುವ ವಸ್ತು ನಿಷ್ಠ ಸತ್ಯವನ್ನು ವಾಸ್ತವತೆಯ ಬೆಳಕಿನಲ್ಲಿ ಗುರುತಿಸುವುದು ಈ ಅಧ್ಯಯನದ ಗುರಿಯಾಗಿದೆ.

ಆಧುನಿಕ ಪ್ರಪಂಚದಲ್ಲಿ ಗ್ರಾಮಗಳು ನಿಧಾನವಾಗಿ ನವೀಕರಣ ಪ್ರಕ್ರಿಯೆಗೆ ಒಳಗಾಗುತ್ತಲಿವೆ. ಜನರಲ್ಲಿ ಹಿಂದೆ ಇದ್ದ ಪರಸ್ಪರ ನಂಬಿಕೆ, ನಡವಳಿಕೆ, ಸಹಾಯ, ಸಹಕಾರ, ಸಾಮರಸ್ಯ, ಸಹಜೀವನ, ಸಹಭೋಜನದ ಸಂಪ್ರದಾಯದ ಲಕ್ಷಣಗಳು ವಿಧಿ ವಿಧಾನಗಳು ಈಗಿಲ್ಲ. ಅವುಗಳ ಸ್ಥಾನದಲ್ಲಿ ಸ್ವಾರ್ಥ, ಮೋಸ, ದ್ವೇಷ, ವಂಚನೆ, ಒಂಟಿತನ ತುಂಬಿ ತುಳುಕುತ್ತಿವೆ. ಈ ಹಿಂದಿನವುಗಳನ್ನೆಲ್ಲಾ ಹಾಳಾಗದಂತೆ ಉಳಿಸಬೇಕೆನ್ನುವುದು. ಇದನ್ನೇ ಮುರುವರಿಸಬೇಕೆನ್ನುವುದು ನನ್ನ ವಿಚಾರವಲ್ಲದಿದ್ದರೂ, ಹಿಂದಿನವನ್ನು ಹೊಸ ಪೀಳಿಗೆಗೆ ತಿಳಿಸುವುದು ಅವುಗಳಲ್ಲಿ ಏನಾದರೂ ಉತ್ತಮಾಂಶವಿದ್ದರೆ ಜನತೆ ಅದನ್ನು ಸ್ವೀಕರಿಸಬೇಕೆಂದು ಹೇಳುವುದು ಸದ್ಯದ ರಚನೆಯಲ್ಲಿ ಮುಖ್ಯಪ್ರಸ್ತಾಪವಾಗಿದೆ.

ಕಬ್ಬತ್ತಿಯಲ್ಲಿ ಈ ಹಿಂದೆ ಬದುಕು ಹೇಗಿತ್ತು? ಇಂದು ಹೇಗೆ ಬದಲಾವಣೆಗೊಂಡಿದೆ ಎಂಬುದನ್ನು ನಿಷ್ಪಕ್ಷಪಾತವಾಗಿ ಹೇಳುವುದು, ಹಾಗೆಯೇ ಜನಜೀವನ ಹೇಗೆ ಬದಲಾವಣೆ ಹೊಂದಿಕೊಂಡು ಬಂದಿತೆಂಬುದನ್ನು ತಿಳಿಸುವುದು, ಸಾಂಸ್ಕೃತಿಕ ಮೌಲ್ಯಗಳನ್ನು ಅರ್ಥಮಾಡಿ ಇವತ್ತಿನ ಸಮುದಾಯಕ್ಕೆ ಅರಿಯುವಂತೆ ವಿವರಿಸುವುದು ಈ ಪ್ರಬಂಧದ ಪ್ರಮುಖ ಉದ್ದೇಶ. ಈ ಗ್ರಾಮದ ಸಾಂಸ್ಕೃತಿಕ ಬದುಕು ನಾಗರಿಕತೆಯ ಪ್ರಭಾವಕ್ಕೆ ಒಳಗಾದಂತೆ ಪ್ರಾಚೀನ ಸಂಸ್ಕೃತಿಯಲ್ಲಿ ಅಡಕವಾಗಿರುವ ಎಷ್ಟೋ ಅಂಶಗಳು ತೆರೆಮರೆಯ ಸ್ಥಿತಿಯಲ್ಲಿವೆ ಮರೆಯಾಗುವುದಕ್ಕೆ ಮೊದಲೇ ಅವುಗಳನ್ನು ಅವಕಾಶ ದೊರೆತ ನೆಲೆಯಲ್ಲಿ ಗುರುತಿಸಿ ವಿಶ್ಲೇಷಿಸುವ ಕಾರ್ಯ ನಡೆಯಬೇಕಿದೆ. ಅಂದಾಗ ಮಾತ್ರ ಗ್ರಾಮಸಂಸ್ಕೃತಿಯ ಪೂರ್ಣಚಿತ್ರ ಲಭ್ಯವಾಗುತ್ತದೆ. ಈ ದೃಷ್ಟಿಯಿಂದ ಒಂದು ಐತಿಹಾಸಿಕ ಮಹತ್ವದ ಕಬ್ಬತ್ತಿಯನ್ನು ಅಭ್ಯಸಿಸಿ ದಾಖಲಿಸುವ ಸಲುವಾಗಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಅರೆಮಲೆನಾಡು ಪ್ರಭಾವವನ್ನು ಪ್ರತಿಬಿಂಬಿಸುವ ಪ್ರದೇಶವಾದ ಕಬ್ಬತ್ತಿ ಹಲವಾರು ವೈಶಿಷ್ಟ್ಯಗಳ ತವರು. ಚಾರಿತ್ರಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ಸಿರಿ ಸಂಪತ್ತು, ಕೀರ್ತಿ ಕೊಡುಗೆಯನ್ನು ಕೊಟ್ಟಿರುವುದು ಉಲ್ಲೇಖನೀಯ. ಗತಕಾಲದಲ್ಲಿ ನಡೆದ ಘಟನೆಗಳನ್ನು, ಭೌಗೋಳಿಕ ವಿವರಗಳನ್ನು, ಯುದ್ಧದ ಸೋಲು-ಗೆಲುವಿನ ಪರಿಣಾಮಗಳನ್ನು, ವೀರರು ಜಯಸಿದ ಕಾಳಗಗಳನ್ನು

ಧರ್ಮದ ದಬ್ಬಾಳಿಕೆಯನ್ನು, ರಾಜರು ಕೊಟ್ಟ ದತ್ತಿದಾನಗಳನ್ನು, ಮಾಡಿದ ಯಜ್ಞಾಯಾಗಾದಿಗಳನ್ನು, ಆರ್ಥಿಕ ಅಭಿವೃದ್ಧಿಯನ್ನು ಈ ಅಧ್ಯಯನದಿಂದ ಅರಿಯಬಹುದು. ಕ್ಷೇತ್ರಜ್ಞರಿಗೆ ಅಪರಿಮಿತವಾದ ಸತ್ಯದ ತಿರುಳನ್ನು ಸ್ಥಳ ಕೇಂದ್ರಿತ ಅಧ್ಯಯನ ದೊರಕಿಸಿ ಕೊಡುತ್ತದೆ. ಕಾಲಕಾಲಕ್ಕೆ ಊರುಗಳು ಪಡೆದ ಸ್ಥಾನಮಾನಗಳು, ಅವುಗಳ ಹೆಸರಿನಲ್ಲಾದ ಮಾರ್ಪಾಡುಗಳ ಬಗ್ಗೆಯು ತಿಳಿಯಬಹುದು. ಈ ಊರು ರಾಜವಂಶಗಳ ಆಳ್ವಿಕೆಗೆ ಒಳಪಟ್ಟು ಪ್ರಾಮುಖ್ಯ ಪಡೆದಿರುವುದಕ್ಕೆ ಅತ್ಯುತ್ತಮ ಉದಾಹರಣೆಗಳಾಗಿ ಶಾಸನಗಳು, ವಾಸ್ತುಶಿಲ್ಪ ಕೆರೆಕಟ್ಟೆ ಇತ್ಯಾದಿಗಳನ್ನು ಇಂದಿನವರೆಗೂ ಉಳಿದುಬಂದಿರುವುದೇ ಸಾಕ್ಷಿಯಾಗಿದೆ. ಧಾರ್ಮಿಕ ಸಂಪ್ರದಾಯಗಳ ಮೇಲೆ, ಕಟ್ಟೆಕಟ್ಟಳೆಗಳ ಮೇಲೆ, ಪುರಾತನ ಸಂಸ್ಕೃತಿ ಮೇಲೆ, ವ್ಯಾಪಾರ ಮತ್ತು ವಾಣಿಜ್ಯಗಳ ಮೇಲೆ ಸಾಂಸ್ಕೃತಿಕ ಬೇರುಗಳು ಹೇಗೆ ಬೆಳಕು ಬೀರುತ್ತವೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬಹುದು.

ಯಾವುದೇ ಒಂದು ಗ್ರಾಮದ ಅಧ್ಯಯನಕ್ಕೆ ಸಂಸ್ಕೃತಿಯ ಎಳೆಗಳನ್ನು ಬಿಚ್ಚಿ ನೋಡುವುದು ಸೂಕ್ತ. ಈ ನೆಲೆಯಲ್ಲಿನ ಅಪರೂಪದ ಕೃತಿಯೆಂದರೆ 'ಹುಟ್ಟಿದ ಹಳ್ಳಿ', 'ಹಳ್ಳಿಹಾಡು', ಹುಟ್ಟೂರಿನ ಜಾನಪದದ ವಿವಿಧ ಪ್ರಕಾರಗಳನ್ನು ಹೇಳುತ್ತಾ ಗ್ರಾಮ ಸಂಸ್ಕೃತಿಯನ್ನು ಮೊದಲ ಬಾರಿಗೆ ಒಂದೆಡೆ ಸಂಗ್ರಹಿಸಿ ಕೊಟ್ಟಿರುವುದು ಈ ಕೃತಿಯಲ್ಲಿ ಕಂಡುಬರುತ್ತದೆ. "ಜಾನಪದ ದೃಷ್ಟಿಯಿಂದ ಗ್ರಾಮವೊಂದನ್ನು ಆರಿಸಿಕೊಂಡು ಯಾವ ಯಾವ ಮುಖದಿಂದ ಅಧ್ಯಯನ ಮಾಡಬಹುದು. ಸಂಸ್ಕೃತಿಯ ನೆಲೆಗಳು ಯಾವ ರೂಪದಲ್ಲಿ ತೋರಿ ಬರುತ್ತವೆ ಎಂಬುದಕ್ಕೆ ಒಂದು ಶ್ರೇಷ್ಠ ಮಾದರಿಯಾಗಿ ಈ ಕೃತಿ ಇಂದಿಗೂ ಅದ್ವಿತೀಯವೆನಿಸಿ ನಿಲ್ಲುತ್ತದೆ. ಕಬ್ಬತ್ತಿ ಗ್ರಾಮವರ್ಗಕ್ಕೆ ಸೇರಿದ್ದರೂ ಇಂದು ಮಾರ್ಪಾಡುಗಳು ಕಂಡುಬರುತ್ತಿವೆ. ಈ ಪರಿವರ್ತನೆಯ ಕಾಲದಲ್ಲಿ ಈ ಗ್ರಾಮ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ವೈಶಿಷ್ಟ್ಯವನ್ನು ಉಳಿಸಿಕೊಳ್ಳಲು ಯಾವ ರೀತಿಯಲ್ಲಿ ಪ್ರಯತ್ನಿಸುತ್ತಿದೆ ಎಂಬುದು ಗಮನಾರ್ಹ.

ಗ್ರಾಮಕೇಂದ್ರಿತ ಅಧ್ಯಯನಗಳಲ್ಲಿ ಒಂದು ಊರಿನ ಅಧ್ಯಯನಕ್ಕೂ ಇನ್ನೊಂದು ಊರಿನ ಅಧ್ಯಯನಕ್ಕೂ ವ್ಯತ್ಯಾಸವಿರುತ್ತದೆ. ಒಂದು ಊರು ಎಂಬುದು, ಒಂದು ಸಮಾಜದ ಅತ್ಯಂತ ಚಿಕ್ಕ ಘಟಕವಾಗಿರುವುದರಿಂದ ಅಧ್ಯಯನಕ್ಕೆ ಮೂಲಭೂತವಾದ ಸೀಮಿತವಾದ ಮಾದರಿ ಸಿಕ್ಕಿದಂತೆ ಆಗುತ್ತದೆ. ಇಂತಹ ಅಧ್ಯಯನಗಳು ಬೇರೆ ಬೇರೆ ನಡೆದಾಗಲೂ, ಈ ಎಲ್ಲದರಿಂದ ಒಟ್ಟು ಮಾದರಿಗಳನ್ನು ಪತ್ತೆ ಹಚ್ಚಿದಂತೆ ಆಗಬಹುದು. ಇಂತಹ ಅಧ್ಯಯನವನ್ನು ಒಟ್ಟು ಜನಪದಕ್ಕೆ ಅನ್ವಯಿಸಿ ನಡೆಸುದಾಗ ಸಮಗ್ರ ಮಾದರಿಯೊಂದು ಗೋಚರವಾಗಬಹುದು. ಸಮಗ್ರ ಮಾದರಿ ಮತ್ತು ಮೂಲ

ಮಾದರಿಗಳು ಪರಸ್ಪರ ಪೂರಕವಾದವು. ಈ ದೃಷ್ಟಿಯಿಂದ ಪ್ರಸ್ತುತ ಕಬ್ಬತ್ತಿ ಕುರಿತ ಅಧ್ಯಯನ ಅಂತಹ ಮಾದರಿಯೊಂದನ್ನು ಒದಗಿಸುತ್ತದೆ ಎಂದು ಭಾವಿಸುತ್ತೇನೆ.

ಒಂದು ಸಾಂಸ್ಕೃತಿಕ ಅಧ್ಯಯನದಿಂದಾಗಿ ಸ್ಥಳ ಕೇಂದ್ರಿತ ಪ್ರಾಚೀನತೆಯನ್ನು ಗ್ರಾಮಗಳಿಗೆ ಹಿನ್ನಲೆಯಾಗುವ ಭೌಗೋಳಿಕ, ಐತಿಹಾಸಿಕ, ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಆಯ್ಕೆ ಅಂಶಗಳನ್ನು ಅರಿಯಬಹುದು. ಒಂದು ಪ್ರದೇಶದ ಸಾಮಾಜಿಕ ಜನಜೀವನ ಮತ್ತು ಪ್ರಾಣಿಪಕ್ಷಿಗಳ ಮೇಲಿನ ಪ್ರೀತಿ, ರೀತಿ–ನೀತಿಗಳು ಆಡಳಿತ ರಕ್ಷಣೆಯ ವಿಧಿವಿಧಾನಗಳ ವಿಷಯಗಳನ್ನು ತಿಳಿಯಬಹುದು. ಹಾಗೆಯೇ ಆದಾಯದ ಮೂಲ ಮತ್ತು ರಾಜಕೀಯ ವಿಷಯಗಳನ್ನು ನೋಡಬಹುದು. ಧಾರ್ಮಿಕ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುವುದನ್ನು ಅಂದಿನ ಕಾಲದಲ್ಲಿ ಬೆಳೆದ ಸಂಸ್ಕೃತಿಯ ಇತಿಹಾಸವನ್ನು ತಿಳಿಯುವುದಿಲ್ಲಿ ಸಹಕಾರಿಯಾಗಿದೆ. ಜನಪದ ಕಲೆ–ಸಾಹಿತ್ಯ, ಗೀತೆ, ಕಥೆ, ಗಾದೆ, ಒಗಟು, ಒಡಪು, ನಂಬಿಕೆ, ಸಂಪ್ರದಾಯ ಅಡುಗೆ, ಉಡುಗೆ–ತೊಡುಗೆ, ವೈದ್ಯಪದ್ಧತಿ, ವಿವಿಧ ಗಿಡಮೂಲಿಕೆಯ ಔಷಧಿಯ ಬಳಕೆ, ನಿತ್ಯ ಬಳಕೆಯ ವಸ್ತುಗಳು ಮೊದಲಾದವುಗಳ ಪರಿಚಯ ಕೂಡ ಇಲ್ಲಿನ ಮುಖ್ಯ ವಿಷಯ. ಗ್ರಾಮದ ಜಾನಪದದ ವ್ಯಾಪ್ತಿಯ ಏಳು–ಬೀಳಿನ, ಹಾಸು–ಬೀಸಿನ ಹಾದಿಯನ್ನು ವಿವಿಧ ಮಗ್ಗಲುಗಳಿಂದ ಸಾಬೀತುಪಡಿಸಲು ಸಾಧ್ಯವಾಗುವುದು.

ನೂರಾರು ವರ್ಷಗಳಿಂದ ಅಗೋಚರ ಕರ್ತೃಗಳಿಂದ ಬಾಯಿಂದ ಬಾಯಿಗೆ ಗೋಪ್ಯವಾಗಿ ಉಳಿದುಕೊಂಡು ಬಂದ ಸಾಹಿತ್ಯ ಸಂಪತ್ತು ಹೇರಳವಾಗಿದೆ. ಆದ್ದರಿಂದ ಈ ಗ್ರಾಮ ಜನಪದ ಸಂಪತ್ತಿನ ಸಮೃದ್ಧ ಕಣಜವಾಗಿದೆ. ಮೌಖಿಕ ಸಾಹಿತ್ಯ ಬಿತ್ತರಗೊಳ್ಳುವುದು ಕೆಲಸಕಾರ್ಯ ನಡೆಯುವಾಗ ಹೇಳುವುದು, ಹಾಡುವುದು ಕಂಡು ಬರುವುದು. ಜನಪದ ಸಾಹಿತ್ಯ ಕಲಾವಸ್ತು, ಜನಪದ ಉಪಕರಣಗಳ ಸಂಗ್ರಹಣೆಯ ಅಗತ್ಯ ಇಂದು ಹೆಚ್ಚಾಗಿ ಮನವರಿಕೆಯಾಗುತ್ತಿದೆ. ಹಾಗೆಯೇ ಜಾನಪದ ಕ್ರಮೇಣ ಕಣ್ಮರೆಯಾಗಬಹುದೆಂಬ ಆತಂಕವು ಆವರಿಸಿದೆ. ಆದ್ದರಿಂದ ಜಾನಪದವನ್ನು ಸಂಗ್ರಹಿಸುವುದು ಮತ್ತು ಕಲಾವಿದರಿಗೆ ಪ್ರೋತ್ಸಾಹ ನೀಡಿ ಕಲೆ ಮುಂದುವರೆ ಯುವಂತೆ ಮಾಡುವುದು ಅವಶ್ಯಕ. ಇದರಿಂದ ಜಾನಪದವನ್ನು ಉಳಿಸುವ ಬೆಳೆಸುವ ಪ್ರಯತ್ನ ಮಾಡಿದಂತಾಗುವುದು. ಆಧುನಿಕತೆಯ ಪ್ರಭಾವದಿಂದ ಜಾನಪದ ಇಳಿಮುಖ–ವಾಗುತ್ತಿದೆಯಾದರೂ ಅವುಗಳ ಅಸ್ತಿತ್ವ ಸಂಪೂರ್ಣ ಅಳಿಯುವುದು ಸಾಧ್ಯವಿಲ್ಲ. ಒಂದಲ್ಲ ಒಂದು ರೂಪದಲ್ಲಿ ಅವು ಮಾಸಿ ಹೋಗುವಂತೆ ಕಂಡರೂ ಕೂಡ ಇನ್ನೊಂದು ರೂಪದಲ್ಲಿ ಅವುಗಳ ಅಸ್ತಿತ್ವ ಹೊಸ ಮಾದರಿಯಲ್ಲಿ ಮುಂದುವರೆದು ಬರುತ್ತಿರುವುದನ್ನು ಕಾಣುತ್ತೇವೆ

ಗ್ರಾಮೀಣ ಪ್ರದೇಶದ ಆರ್ಥಿಕ ಜೀವನ ಸರಳವಿದ್ದಂತೆ ಕ್ಲಿಷ್ಟವೂ ಆಗಿದೆ. ಇಲ್ಲಿನ ಜನರ ಮುಖ್ಯ ಉದ್ಯೋಗ ವ್ಯವಸಾಯ. ಮುಖ್ಯಬೆಳೆ ಭತ್ತ, ಆಲೂಗೆಡ್ಡೆ, ರಾಗಿ ವರ್ಷಕ್ಕೆ ಒಂದು ಬೆಳೆಗಿಂತ ಹೆಚ್ಚು ಬೆಳೆ ತೆಗೆಯಲಾಗುವುದಿಲ್ಲ. ಹಾಗೂ ಇಳುವರಿಯು ಕಡಿಮೆಯಾಗುತ್ತಿದೆ. ಹೆಚ್ಚು ಭೂಮಿ ಮಳೆಯ ಆಸರೆಯನ್ನು ಅವಲಂಭಿಸಿದೆ. ಆರ್ಥಿಕ ಬೆಳೆಯಾದ ಭತ್ತ, ಆಲೂಗೆಡ್ಡೆ, ತರಕಾರಿ, ಸಾಂಬಾರ ಪದಾರ್ಥ ಇವರಿಗೆ ಲಾಭದಾಯಕ ಬೆಳೆ. ಜೊತೆಗೆ ಹಳ್ಳಿಗರು ಹಸು, ಹೋರಿಗಳನ್ನು ಸಾಕಿ ಲಾಭ ಪಡೆದುಕೊಳ್ಳುತ್ತಿದ್ದಾರೆ. ಇದರಿಂದ ಮನೆಮಂದಿಯೆಲ್ಲ ದುಡಿದಾಗ ಮಾತ್ರ ಸಾಧಾರಣ ನೆಮ್ಮದಿಯ ಬದುಕನ್ನು ನಡೆಸಲು ಸಾಧ್ಯವಾಗುವುದು. ವಾಸ್ತವವಾಗಿ ವ್ಯವಸಾಯದ ವರಮಾನದಿಂದ ಸಂತೃಪ್ತ ಜೀವನ ನಡೆಸುತ್ತಿರುವವರು ಬಹಳ ಕಡಿಮೆ. ಹತ್ತಾರು ಕುಟುಂಬಗಳು ಮಧ್ಯಮ ವರ್ಗಕ್ಕೆ ಸೇರಿರಬಹುದು. ಉಳಿದಂತೆ ಊರಿನಲ್ಲಿ ರೈತವರ್ಗದಲ್ಲಿ ಸಣ್ಣ ಹಿಡುವಳಿದಾರರೇ ಹೆಚ್ಚು. ಕೃಷಿ ಜಮೀನು ಅನಾವೃಷ್ಟಿ, ಅತಿವೃಷ್ಟಿ ಪೀಡನೆ, ಸಾಲಶೂಲಗಳ ಭಾರ ಮೊದಲಾದವುಗಳ ಬಾಧೆಯಿಂದ ಬೆಂದು-ನೊಂದು ನರಳುತ್ತಿರುವರೇ ಹೆಚ್ಚು. ಎರಡನೇ ಬೆಳೆ ಬೆಳೆಯಲು ಸಾಧ್ಯವಿಲ್ಲದ ಕಾರಣ ಮೊದಲ ಬೆಳೆಯಿಂದ ಅರೆ ತೃಪ್ತ ಜೀವನ ನಡೆಸಬೇಕಾಗಿದೆ. ಊರಿನ ಉದ್ಯೋಗದಲ್ಲಿ ಕೂಲಿಯು ಹಣಕ್ಕಿಂತ ಹೆಚ್ಚಾಗಿ ಧಾನ್ಯರೂಪದಲ್ಲಿ ಇರುವುದು. ಕೃಷಿ ಕಾರ್ಮಿಕರ ಸಂಬಳ ಏರಿದರೂ ಜೀವನಸ್ಥಿತಿ ಏನೇನೂ ಸುಧಾರಿಸಿಲ್ಲ. ಅವರಿಗೆ ವರ್ಷದ ಕೆಲವು ಅವಧಿಯಲ್ಲಿ ಕೆಲಸವಿರುವುದಿಲ್ಲ. ಇದೆಲ್ಲ ಗ್ರಾಮೀಣ ಪ್ರದೇಶದಲ್ಲಿ ಜನರ ಸಂಪಾದನೆ ಮತ್ತು ಕೊಳ್ಳುವ ಶಕ್ತಿಗಳ ಕೊರತೆಗೆ ಕಾರಣವಾಗಿದೆ. ಅವರ ನಾಗರಿಕ ಜೀವನ ನಿರಾಕರಿಸುವುದಕ್ಕೆ ಆರ್ಥಿಕ ಕಾರಣಗಳಿರುತ್ತವೆ ಎಂಬುದನ್ನು ಮರೆಯುವಂತಿಲ್ಲ.

ಗ್ರಾಮಗಳಲ್ಲಿ ಇಂದು ರಾಜಕೀಯ ಮಧ್ಯೆ ಪ್ರವೇಶಿಸಿದೆ ಚುನಾವಣೆ ದೆಸೆಯಿಂದ ಜನರಿಗೆ ಹೊಸ ರೀತಿಯ ದ್ವೇಷಾಸೂಯೆಗಳು ಹುಟ್ಟುತ್ತಿವೆ. ಪಂಚಾಯಿತಿ ಹಾಗೂ ತಾಲ್ಲೂಕು ಬೋರ್ಡುಗಳ ಮೇಲಂತೂ ಈ ಪರಿಸ್ಥಿತಿ ತೀವ್ರತರವಾದ ಪರಿಣಾಮ ಬೀರಿದೆ. ಗ್ರಾಮ ಜೀವನ ಪರಿಚಯವಿಲ್ಲದವರು ತಾಲ್ಲೂಕು ಬೋರ್ಡಿನ ಸದಸ್ಯ-ರಾಗಿರುವುದರಿಂದ ಗ್ರಾಮಸ್ಥರು, ಇವರು ತಮ್ಮ ಮೇಲೆ ದಬ್ಬಾಳಿಕೆ ನಡೆಸಲು ಬಂದ ಹೊರಗಿನ ಜನ ಎಂಬ ಭಾವನೆಯನ್ನು ಇಟ್ಟುಕೊಳ್ಳುತ್ತಾರೆ. ಅಧಿಕಾರಕ್ಕೆ ಬಂದ ಜನ ಗ್ರಾಮದ ಹಿನ್ನೆಲೆಯನ್ನು ಅರಿಯದೆ ಅನೇಕ ಬಗೆಯ ತಪ್ಪುಗಳನ್ನು ಮಾಡುತ್ತಾರೆ. ಹೀಗಾಗಿ ಗ್ರಾಮದಲ್ಲಿ ವೈಯಕ್ತಿಕ ಹಾಗೂ ಪಕ್ಷೀಯ ಪೈಪೋಟಿ ದ್ವೇಷಗಳು ಹೆಚ್ಚಾಗುತ್ತಿವೆ. ಈ ಎಲ್ಲದರ ದೆಸೆಯಿಂದ ಗ್ರಾಮ ಜೀವನದ ಸಮಸ್ಯೆಗಳು ಬೆಳೆಯುತ್ತಿವೆ.

ಅಧ್ಯಯನ ನಡೆಸುವಾಗ ಮುಖ್ಯವಾಗಿ ಅವಲೋಕನ ವಿಧಾನವನ್ನು ಅನುಸರಿಸಲಾಗಿದೆ. ಕಬ್ಬತ್ತಿ ಗ್ರಾಮದ ಹಿರಿಯರಲ್ಲಿ ಹಲವಾರು ವಿಷಯಗಳನ್ನು ಕೇಳಿ

ತಿಳಿದುಕೊಳ್ಳಲಾಗಿದೆ. ಅಧ್ಯಯನ ನಡೆಸುವಾಗ ಅವಲೋಕಿಸಿದ ವಿಷಯಗಳನ್ನು ಸಂಕ್ಷಿಪ್ತವಾಗಿ ಬರೆದುಕೊಳ್ಳಲಾಯಿತು. ಹಾಗೆಯೇ ಕೇಳಿ ಹೇಳಿ ಪಡೆದ ವಿಷಯವನ್ನು ರೆಕಾರ್ಡು ಮಾಡಿ ಸಂಗ್ರಹಿಸಿ ವಿಷಯಗಳನ್ನು ಒಂದೆಡೆ ಬರೆದುಕೊಂಡು ಅನಂತರ ಅವುಗಳನ್ನು ಕ್ರಮಬದ್ಧವಾಗಿ ಬರೆಯಲು ಸಾಧ್ಯವಾಯಿತು. ಅಧ್ಯಯನಕ್ಕೆ ಒಳಪಡಿಸಿದ ಹೆಚ್ಚು ಜನರಿಗೆ ಪ್ರಶ್ನೆಗಳನ್ನು ಹಾಕಿ ಉತ್ತರವನ್ನು ಕಂಡುಕೊಳ್ಳಲಾಯಿತು. ಜನರಲ್ಲಿರುವ ಆಚರಣೆಯ ಅಚ್ಚುಕಟ್ಟು, ನಂಬಿಕೆ, ನಡವಳಿಕೆ, ಮದುವೆ ಹಬ್ಬ-ಹರಿದಿನ, ಜಾತ್ರೆ, ಉತ್ಸವ, ದೇವಾಲಯ ಇತ್ಯಾದಿ ಅಂಶಗಳ ಬಗ್ಗೆ ಸ್ವತಃ ಭೇಟಿಮಾಡಿ ಅವಲೋಕನ ಮಾರ್ಗವನ್ನು ಅನುಸರಿಸಲಾಗಿದೆ.

ಇಲ್ಲಿನ ಮಾಹಿತಿಗಳು ಮೊದಲ ಬಾರಿಗೆ ಬೆಳಕು ಚೆಲ್ಲುತ್ತಿರುವುದರಿಂದ ಕಬ್ಬತ್ತಿ ಗ್ರಾಮವನ್ನು ಹಲವು ಆಯಾಮಗಳಲ್ಲಿ ಅಧ್ಯಯನ ಮಾಡಲಾಗಿದೆ. ವಿವರಣಾತ್ಮಕವಾಗಿ ಕೆಲವೊಮ್ಮೆ ವಕ್ತೃಹೇಳಿದ್ದನ್ನು ಹಾಗೆಯೇ ಒಪ್ಪಿಕೊಳ್ಳದೆ ವಿಶ್ಲೇಷಣಾತ್ಮಕ ವಿಧಾನವನ್ನು ಅನುಸರಿಸಿ ಮತ್ತೊಮ್ಮೆ ಮೌಲಿಕವಾಗಿ ನೋಡಿ ಅನುಕೂಲಕರವಾಗಿ ಚರ್ಚಿಸಿದ ವಿಧಾನದ ಹಿರಿಮೆ ಗರಿಮೆಗಳನ್ನು ಗುರುತಿಸಲಾಗಿದೆ. ಈ ಒಂದು ಕ್ಷೇತ್ರ ಕಾರ್ಯದಲ್ಲಿ ಅನೇಕ ರೀತಿಯ ಜನರನ್ನು ಕಾಣಲಾಗಿದೆ. ಕೆಲವರಲ್ಲಿ ಅವರ ನಡವಳಿಕೆಯಿಂದ ಉತ್ತಮ ಸಂಸ್ಕೃತಿಯು ಹೇಗೆ ಮನೆಮಾಡಿಕೊಂಡಿದೆ ಎಂಬುದು ವೇದ್ಯವಾಯಿತು. ಅನೇಕ ವಿಷಯಗಳ ಬಗ್ಗೆ ಕ್ಷೇತ್ರ ಕಾರ್ಯ ನಡೆಸುವ ಅಪಾರ ಅನುಭವ ಮಾಹಿತಿ ಸಂಗ್ರಹಿಸಬೇಕಾಗಿದ್ದ ಹೊತ್ತಿಗೆ ಸಹನೆ ಸ್ಫೂರ್ತಿಯು ಹೆಚ್ಚು ಫಲಕಾರಿಯಾಯಿತು.

ಸಂಶೋಧನಾ ಕಾರ್ಯದಲ್ಲಿ ಕಬ್ಬತ್ತಿ ಗ್ರಾಮದಲ್ಲಿ ದೊರೆಯುವ ಲಿಖಿತ ಸಾಮಗ್ರಿ ಮತ್ತು ಮೌಖಿಕ ಸಾಮಗ್ರಿಗಳೆರಡನ್ನು ಬಳಸಿಕೊಳ್ಳಲಾಗಿದೆ. ಈ ಪರುಪರಗಳು ಹೇಗೆ ಪ್ರತಿಕ್ರಿಯಿಸಿವೆ ಎಂಬುದನ್ನು ಪರಿಶೀಲಸಲಾಗಿದೆ. ಹೀಗೆ ಕಬ್ಬತ್ತಿ ಗ್ರಾಮವನ್ನು ಕೇಂದ್ರವಾಗಿರಿಸಿಕೊಂಡು ಸಾಧ್ಯವಾದಷ್ಟು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಇಷ್ಟು ವ್ಯಾಪಕವಾಗಿ ಅಧ್ಯಯನ ಮಾಡಿದಾಗ ಒಂದೆ ವಿಷಯದ ಬಗ್ಗೆ ಮತ್ತು ಜನಪದ ಸಾಹಿತ್ಯದ ಮತ್ತು ಬದುಕಿನ ಬಗೆಗೆ ಹಲವು ನಿರೂಪಣೆಗಳು ಲಭಿಸಿವೆ. ಅವುಗಳಲ್ಲಿ ಪ್ರಸ್ತುತ ಅಧ್ಯಯನಕ್ಕೆ ಎಷ್ಟು ಅವಶ್ಯಕವೋ, ಮುಖ್ಯವೋ ಅವುಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ. ಲಿಖಿತ ಸಾಮಾಗ್ರಿಗಳಲ್ಲಿ ಶಾಸನಗಳು ಅಪೂರ್ವ ಲಿಖಿತ ಸಾಮಗ್ರಿ ಎನಿಸುತ್ತವೆ. ಶಾಸನ ಸಂಪತ್ತು ಗಣನೀಯವಾದದ್ದು. ಈ ಶಾಸನಗಳನ್ನು ಶಿಲಾಶಾಸನಗಳು, ತಾಮ್ರಶಾಸನಗಳೆಂದು ವರ್ಗೀಕರಿಸಲಾಗಿದೆ. ಶಿಲಾ ಶಾಸನಗಳು ಸಾರ್ವಜನಿಕರ ದಾಖಲೆಯಾದರೂ ತಾಮ್ರ ಶಾಸನಗಳು ವೈಯಕ್ತಿಕ ದಾಖಲೆಗಳಾಗಿವೆ. ಶಿಲಾಶಾಸನ ಶಾಸನ ಕ್ಷೇತ್ರದ ಬೆಲೆಯುಳ್ಳ ಭಾಗವೆಂದು ಹೇಳಬಹುದು. ಈ ಶಿಲಾಶಾಸನಗಳು ದಾನ ಶಾಸನ, ವೀರಶಾಸನಗಳೆಂದು ಸ್ಥೂಲವಾಗಿ ಎರಡು

ರೀತಿಯಲ್ಲಿವೆ. 'ದಾನಶಾಸನ'ದ ತಲೆಯ ಮೇಲೆ ಶಿವಲಿಂಗ, ಸೂರ್ಯ, ಚಂದ್ರ, ಆಕಳು-ಕರು ಶಿಲ್ಪ ಸಾಮನ್ಯ. ವೀರ ಶಾಸನಗಳಲ್ಲಿ ವೀರಗಲ್ಲು, ಮಾಸ್ತಿಕಲ್ಲು, ಆತ್ಮಬಲಿದಾನ ಕಲ್ಲುಗಳು ಎಂದು ಪರಿಗಣಿತವಾಗುತ್ತವೆ. ಇವು ಬಹಳಷ್ಟು ಸಲ ಕೇವಲ ಶಿಲ್ಪ ರೂಪದವುಗಳಾಗಿದ್ದು ಕೆಲವೊಮ್ಮೆ ಬರಹವನ್ನು ಒಳಗೊಂಡಿರುತ್ತವೆ. ಮಾಸ್ತಿಕಲ್ಲು ಸ್ತ್ರೀಯ ಎತ್ತಿದ ಬಲಗೈ ಚಿತ್ರವನ್ನೊಳಗೊಂಡಿರುತ್ತದೆ. ಕೆಲವೊಮ್ಮೆ ಅವಳ ಗಂಡನೊಂದಿಗೆ ನಿಂತ ಚಿತ್ರವೂ ಇರುತ್ತದೆ. ರುಂಡ ಕತ್ತರಿಸಿಕೊಳ್ಳುವ, ಚಿತಾಪ್ರವೇಶ ಮಾಡುವ ಚಿತ್ರಗಳಿದ್ದರೆ ಅವು ಆತ್ಮ ಬಲಿದಾನ ಕಲ್ಲುಗಳಾಗಿರುತ್ತವೆ. ನಿಷಿದಿ ಕಲ್ಲು ಸಲ್ಲೇಖನ ವ್ರತದಿಂದ ಮಡಿದ ಜೈನ ವ್ಯಕ್ತಿಯ ಸ್ಮಾರಕವಾಗಿರುತ್ತದೆ.

ಮೌಖಿಕ ಸಾಮಗ್ರಿಯ ಮುಖ್ಯಭಾಗ ಜನಪದ ಸಾಹಿತ್ಯ. ಇದರ ಅಂಶಗಳಾದ ಗೀತೆ, ಕಥೆ, ಗಾದೆ, ಒಗಟು, ಒಡಪು ನಮ್ಮಲ್ಲಿ ದೊಡ್ಡ ಪ್ರಮಾಣದಲ್ಲಿ ಸಿಗುತ್ತವೆ. ಇವು ಸಾಂಸ್ಕೃತಿಕ ಬೆಳವಣಿಗೆ ಪ್ರಾದೇಶಿಕ ಪ್ರಸಾರಗಳನ್ನು ಪ್ರಕಟಿಸಲು ಈ ಸಾಮಗ್ರಿಗಳು ಸಹಾಯವಾಗುತ್ತವೆ. ಗ್ರಾಮೀಣ ಜನಜೀವನದ ಚಿಕ್ಕಚಿಕ್ಕ ಅಂಶಗಳನ್ನು ತೆಗೆದುಕೊಂಡು ಆಳವಾಗಿ ಅಭ್ಯಾಸ ಮಾಡಲು ಅವಕಾಶವಿದೆ. ಅವುಗಳು ಎಲ್ಲಾ ಸಾಮಗ್ರಿಗಳನ್ನು ಒದಗಿಸುತ್ತವೆ. ಸಾಂಸ್ಕೃತಿಕ ಅಧ್ಯಯನದ ಬೆಳವಣಿಗೆಯಲ್ಲಿ ಗ್ರಾಮೀಣ ಬದುಕಿನ ಸಂಸ್ಕೃತಿಯನ್ನು ದಾಖಲಿಸುವುದು ಈ ಅಧ್ಯಯನದ ಆಶಯವಾಗಿದೆ.

ಸಾಂಸ್ಕೃತಿಕ, ಜಾನಪದ ಕುರಿತ ಅಧ್ಯಯನಕ್ಕೆ ಕ್ಷೇತ್ರ ಕಾರ್ಯ ತುಂಬ ಅನಿವಾರ್ಯ ಮತ್ತು ಆಧಾರ. ಕ್ಷೇತ್ರ ಕಾರ್ಯ ತುಂಬ ಕಠಿಣವಾದ ಕಾರ್ಯವಾಗಿದೆ. ಇದರಲ್ಲಿ ಬೇಸರಿಸದೆ ಮುನ್ನುಗಿದರೆ ಮಾತ್ರ ಯಶಸ್ಸು. ಈ ಮೊದಲೇ ಕ್ಷೇತ್ರಕಾರ್ಯದ ಬಗ್ಗೆ ತಿಳಿದಿದ್ದರಿಂದ ಈ ಅಧ್ಯಯನದಲ್ಲಿ ಆಸಕ್ತಿ ಬೆಳೆಸಿಕೊಂಡು ಆನಂತರದಲ್ಲಿ ವಿಷಯ ಆಯ್ಕೆಮಾಡಿಕೊಂಡು ಸಂಶೋಧನೆಯಲ್ಲಿ ತೊಡಗಿಕೊಂಡ ಮೇಲೆ ಗ್ರಾಮದೊಳಗೆಲ್ಲಾ ಓಡಾಡಿ ಮತ್ತಷ್ಟು ಹತ್ತಿರದಿಂದ ಕ್ಷೇತ್ರ ಕಾರ್ಯವನ್ನು ವಿಕ್ಷೀಸಲಾಗಿದೆ. ಇಲ್ಲಿಯ ವಕ್ತೃ ಭೇಟಿ ಮಾಡಲು ಮೊದಲೆ ಅವರಿಗೆ ತಿಳಿಸಿ ಸರಿಯಾದ ಸಮಯ ಸಂದರ್ಭ ನೊಡಿ ಹೋಗಿ ಅವರ ಬಿಡುವಿನ ಹೊತ್ತನ್ನೇ ಹೆಚ್ಚಾಗಿ ಉಪಯೋಗಿಸಿಕೊಂಡಿದ್ದೇನೆ. ಸಂಗ್ರಹಿಸಿದ ಮಾಹಿತಿಯಲ್ಲಿ ಉಂಟಾದ ಗೊಂದಲಕ್ಕೆ ಮತ್ತೆ ವಕ್ತೃವನ್ನು ಭೇಟಿ ಮಾಡಿ ವಿವರಣೆ ಪಡೆದುಕೊಂಡು ಪರಿಹರಿಸಿಕೊಂಡಿದ್ದೇನೆ. ಇದರಿಂದ ಊರಿನವರಿಗೆ ಮತ್ತಷ್ಟು ಹತ್ತಿರದವನಾಗಿದ್ದೇನೆ. ಗ್ರಾಮದ ಬಗೆಗಿರುವ ಎಷ್ಟೋ ವಿಷಯಗಳು ಗ್ರಾಮದವರಿಗೇ ಗೊತ್ತಿಲ್ಲ. ಅಥವಾ ಸಂಶೋಧನೆಯಿಂದ ಅರಿತು ಹೀಗೆಂದು ಅವರಿಗೆ ಹೇಳಿದಾಗ ಗ್ರಾಮದ ಬಗ್ಗೆ ಇಷ್ಟೆಲ್ಲಾ ಇತಿಹಾಸವಿದೆಯಲ್ಲ ಎಂದು ಹೆಮ್ಮೆಪಟ್ಟುಕೊಂಡು ಆಸಕ್ತಿ ತೋರಿಸಿದರು.

ಪ್ರಸ್ತುತ ಅಧ್ಯಯನವು ಆರು ಅಧ್ಯಾಯಗಳನ್ನು ಒಳಗೊಂಡಿದ್ದು ಕ್ರಮವಾಗಿ ಅಧ್ಯಯನದ ಉದ್ದೇಶ, ಸ್ವರೂಪ, ಮತ್ತು ವ್ಯಾಪ್ತಿ, ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನಲೆ, ಸಾಮಾಜಿಕ ವ್ಯವಸ್ಥೆ, ಧಾರ್ಮಿಕವ್ಯವಸ್ಥೆ, ಸಾಂಸ್ಕೃತಿಕ ವಿಚಾರಗಳು ಮತ್ತು ಉಪಸಂಹಾರ ಅಧ್ಯಾಯಗಳನ್ನು ಒಳಗೊಂಡಿದೆ. ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ ಅಧ್ಯಯನದಲ್ಲಿ ಸ್ಥಳದ ಐತಿಹಾಸಿಕ ಹಿನ್ನಲೆ, ವಿಸ್ತೀರ್ಣ ಜನಸಂಖ್ಯೆ, ನಿಷ್ಪತ್ತಿಯ ಬಗ್ಗೆ ಚರ್ಚಿಸಲಾಗಿದೆ. ಸಾಮಾಜಿಕ ವ್ಯವಸ್ಥೆ ಅಧ್ಯಾಯದಲ್ಲಿ ಕೌಟುಂಬಿಕ ವ್ಯವಸ್ಥೆ, ರಕ್ತಸಂಬಂಧ, ವಿವಾಹ ಬಾಂಧವ್ಯ, ಆಸ್ತಿಹಂಚಿಕೆ, ಜಾತಿವ್ಯವಸ್ಥೆ, ಆರ್ಥಿಕವ್ಯವಸ್ಥೆ, ಆಡಳಿತವ್ಯವಸ್ಥೆ ಇತ್ಯಾದಿಗಳನ್ನು ಚರ್ಚಿಸಲಾಗಿದೆ. ಧಾರ್ಮಿಕ ವ್ಯವಸ್ಥೆ ಅಧ್ಯಾಯದಲ್ಲಿ ಇಲ್ಲಿನ ಧರ್ಮಗಳು, ಆಚರಣೆಗಳು, ದೇವಾಲಯಗಳು ಮೊದಲಾದವುಗಳ ಬಗ್ಗೆ ಚರ್ಚಿಸಲಾಗಿದೆ. ಸಾಂಸ್ಕೃತಿಕ ವಿಚಾರಗಳು ಎಂಬ ಅಧ್ಯಾಯದಲ್ಲಿ ನಂಬಿಕೆ, ಹಬ್ಬಗಳು, ಸಂಪ್ರದಾಯಗಳು, ಜನಪದ ಕ್ರೀಡೆಗಳು ಇವುಗಳ ಬಗ್ಗೆ ಚರ್ಚಿಸಲಾಗಿದ್ದು ಕೊನೆಯ ಅಧ್ಯಾಯದಲ್ಲಿ ಒಟ್ಟಾರೆ ಸಂಶೋಧನೆಯ ಸಾರವನ್ನು ನೋಡಬಹುದು. ಕೊನೆಯಲ್ಲಿ ಗ್ರಂಥಋಣ, ವಕ್ತೃವಿವರ, ಛಾಯಾಚಿತ್ರಗಳನ್ನು ಒಳಗೊಂಡಿದೆ.

# ಅಧ್ಯಾಯ – ೨

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

**ಭೌಗೋಳಿಕ ಹಿನ್ನೆಲೆ:**

ಕರ್ನಾಟಕದಲ್ಲಿ ಹಾಸನ ಜಿಲ್ಲೆ ಪ್ರಾಚೀನ ಕಲೆ, ಸಂಸ್ಕೃತಿ, ದೇವಾಲಯಗಳು, ಐತಿಹಾಸಿಕ, ರಮ್ಯತಾಣಗಳಿಂದ ಪ್ರಸಿದ್ಧಿಯನ್ನು ಹೊಂದಿದೆ. ಬೇಲೂರು, ಹಳೇಬೀಡು, ಶ್ರವಣಬೆಳಗೊಳದಲ್ಲಿ ಜಗತ್ತನ್ನೇ ಬೆರಗುಗೊಳಿಸುವ ಉಜ್ವಲ ಕಲಾಕೃತಿಗಳಿವೆ. ಸಕಲೇಶಪುರ ಸಮೀಪದ ಮಂಜರಬಾದ್ ಕೋಟೆ, ಅರಸೀಕೆರೆಯ ಅಮರಗಿರಿ, ಮಾಲೇಕಲ್ ತಿರುಪತಿಬೆಟ್ಟ, 'ದಕ್ಷಿಣಕಾಶಿ' ಎಂದು ಖ್ಯಾತಿ ಪಡೆದ ರಾಮಾನಾಥಪುರ ಈ ಜಿಲ್ಲೆಯಲ್ಲಿವೆ. ಪ್ರತಿಯೊಂದು ಸಂಸ್ಕೃತಿಯು ನಿರ್ದಿಷ್ಟ ಭೌಗೋಳಿಕ ಪರಿಸರದ ಹಿನ್ನೆಲೆಯಲ್ಲಿ ರೂಪುಗೊಂಡಿರುತ್ತದೆ. ಅಲ್ಲಿಯ ಜನರ ರೀತಿನೀತಿಯಷ್ಟೇ ಅಲ್ಲದೇ ಅವರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕು ಕೂಡ ಆ ಪರಿಸರಕ್ಕೆ ಅನುಗುಣವಾಗಿ ನಿರ್ಮಾಣಗೊಂಡಿರುತ್ತದೆ. ಅಂತಹ ಪರಿಸರವನ್ನು ಕುರಿತು ಅಧ್ಯಯನ ಮಾಡುವುದರಿಂದ ಆ ಸ್ಥಳದ ಇತಿಹಾಸ, ಪರಂಪರೆ ಮತ್ತು ಸಾಂಸ್ಕೃತಿಕ ಬದುಕಿನ ಒಳನೋಟಗಳನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ. ಒಂದು ಊರು ಅಥವಾ ಭೂಪ್ರದೇಶದ ಸಂಸ್ಕೃತಿಯನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ. ಒಂದು ಊರು ಅಥವಾ ಭೂಪ್ರದೇಶದ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ ಅಲ್ಲಿನ ಪರಿಸರದ, ಪರಿಚಯ ಕೂಡ ಅತ್ಯಗತ್ಯ. ಈ ಅಧ್ಯಾಯದಲ್ಲಿ ಕಬ್ಬತ್ತಿ ಗ್ರಾಮದಲ್ಲಿ ಭೌಗೋಳಿಕ ಪರಿಸರದ ಪಾತ್ರವೇನು ಎಂಬುದರತ್ತ ಗಮನ ಹರಿಸಲಾಗಿದೆ.

ಬಡವರ ಊಟಿ ಎಂದೇ ಖ್ಯಾತಿ ಪಡೆದ ಹಾಸನ ಜಿಲ್ಲೆ ಹಾಗೂ ತಾಲ್ಲೂಕಿನ ಗ್ರಾಮ ಪಂಚಾಯ್ತಿಯನ್ನು ಒಳಗೊಂಡಿರುವಂತಹ ಒಂದು ಗ್ರಾಮ ಹೊಯ್ಸಳರ ಆಳ್ವಿಕೆಯ ಪ್ರಭಾವದಿಂದ ಅನೇಕ ದೇವಾಲಯಗಳು ಇಲ್ಲಿ ನಿರ್ಮಾಣಗೊಂಡಿವೆ. ಹತ್ತಾರು ಗ್ರಾಮಗಳು ಈ ಗ್ರಾಮದ ಗ್ರಾಮಪಂಚಾಯ್ತಿ ವ್ಯಾಪ್ತಿಗೆ ಸೇರುತ್ತವೆ. ಈ ಗ್ರಾಮ ಬೆಟ್ಟವನ್ನು ಹೊಂದಿರುವುದರಿಂದ ಅರಣ್ಯ ಸಂಪನ್ಮೂಲ ಹೇರಳವಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಕಬ್ಬತ್ತಿ ಗ್ರಾಮದ ಭೌಗೋಳಿಕ ಪರಿಸರವನ್ನು ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಗ್ರಾಮದ ಪರಿಸರ, ಸ್ಥಳನಾಮ ವಿವೇಚನೆ, ಸುತ್ತುಮುತ್ತಲಿನ ಐತಿಹಾಸಿಕ ಹಳ್ಳಿಗಳತ್ತ ಗಮನಹರಿಸಲಾಗಿದೆ.

**ಸ್ಥಳನಾಮ ವಿವೇಚನೆ:**

ಸ್ಥಳನಾಮಗಳು ಮಾನವನ ಬದುಕಿನೊಂದಿಗೆ ಬೆಸೆದುಕೊಂಡು ಬಂದಿದೆ ಎಂದು ಹೇಳಬಹುದಾಗಿದ್ದು ಆದಿಮಾನವ ತನ್ನ ಅಲೆಮಾರಿ ಜೀವನ ತ್ಯಜಿಸಿ ನೀರು

ನೆರಳಿರುವ ಕಡೆ ನೆಲಸಲಾರಂಭಿಸಿದಾಗ ತಾನು ವಾಸ ಮಾಡುವ ಸ್ಥಳವನ್ನು ಗುರುತಿಸಿಕೊಳ್ಳುವ ಸಲುವಾಗಿ ಹೆಸರನ್ನು ಇಟ್ಟುಕೊಳ್ಳಲಾರಂಭಿಸಿದರು. ಹೀಗೆ ಇಟ್ಟುಕೊಂಡ ಹೆಸರಿನ ಹಿಂದೆ ಸೃಷ್ಟಿಗೊಂಡ ಕೆಲವು ಐತಿಹ್ಯ, ಪುರಾಣಗಳಲ್ಲಿ ದೇವರು, ಪ್ರಕೃತಿ ಇತಿಹಾಸ, ವ್ಯಕ್ತಿ, ಜಾನಪದ ಮತ್ತು ಭೌಗೋಳಿಕ ಅಂಶಗಳ ಆಧಾರದ ಮೇಲೆ ಹುಟ್ಟಿಕೊಂಡಿವೆ. ಹಾಗೆಯೇ ಕಬ್ಬತ್ತಿ ಎಂಬ ಹೆಸರು ಬರಲು ಕಾರಣವಾದ ಕೆಲವು ಐತಿಹ್ಯ ಪುರಾಣಗಳು ಸಿಗುತ್ತವೆ.

**ಭೌಗೋಳಿಕ ಸ್ವರೂಪ:**

ಹಾಸನ ತಾಲ್ಲೂಕಿನ ಈ ಗ್ರಾಮವು ಸಮುದ್ರ ಮಟ್ಟದಿಂದ ಸುಮಾರು ೯೭೦ ಮೀಟರ್ ಎತ್ತರದಲ್ಲಿದ್ದು, ಕಬ್ಬತ್ತಿಗ್ರಾಮ ಪಂಚಾಯ್ತಿ ವ್ಯಾಪ್ತಿಯು ಸುಮಾರು ೧೦೦ ಹೆಕ್ಟೇರ್‌ಗಳಿದ್ದು ಅದರಲ್ಲಿ ಬೆಳೆಯಲು ಯೋಗ್ಯವಾದ ಭೂಮಿ ೮೦ ಹೆಕ್ಟೇರ್‌ಗಳಷ್ಟಿದೆ. ೨೦ ಹೆಕ್ಟೇರ್‌ಳಷ್ಟು ಬೆಟ್ಟದಿಂದ ಕೂಡಿದ ಅರಣ್ಯ ಭೂಮಿಯನ್ನು ಹೊಂದಿದೆ. ಕೇವಲ ೨೫ ಹೆಕ್ಟೇರ್ಗಳಷ್ಟು ಮಾತ್ರ ನೀರಾವರಿಯನ್ನು ಒಳಗೊಂಡಿದೆ. ಬೆಳೆಗೆ ಯೋಗ್ಯವಾದ ಭೂಮಿಯಲ್ಲಿ ಖುಷ್ಕಿ, ತರಿ ಮತ್ತು ಭಾಗಾಯಿತು ಎಂದು ಮೂರು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಗ್ರಾಮವು ಹಾಸನದಿಂದ ೨೦ ಕಿ.ಮೀ. ದೂರದಲ್ಲಿದೆ. ರಾಜ್ಯದ ನೈರುತ್ಯ ಭಾಗದಲ್ಲಿದೆ. ಈ ಊರು ಅರೆ ಮಲೆನಾಡು ಸೆರಗಿಗೆ ಸೇರಿರುವುದರಿಂದ ಹಿತಕರ ವಾಯುಗುಣವನ್ನು ಹೊಂದಿದೆ. ಈ ಗ್ರಾಮದ ಕೆಲವೇ ಕಿ.ಮೀ. ದೂರದಲ್ಲಿ ಹೇಮಾವತಿ ನದಿಯು ಹರಿದು ಹೋಗುತ್ತದೆ. ಈ ಪ್ರದೇಶವು ಅತ್ಯಂತ ಶೀತಲವಾದ ವಾಯುಗುಣ ಇದ್ದುದರಿಂದ ಕಬ್ಬತ್ತಿ ಗ್ರಾಮವು ವರ್ಷವಿಡೀ ಹಚ್ಚಹಸುರಿನಿಂದ ಕಂಗೊಳಿಸುತ್ತಿರುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಪರಿಸರದ ವೈಪರೀತ್ಯದಿಂದಾಗಿ ಮಳೆಯ ಪ್ರಮಾಣ ತೀರ ಕಡಿಮೆಯಾಗುತ್ತಿರುವುದನ್ನು ಕಾಣಬಹುದಾಗಿದೆ. ಇಲ್ಲಿಯ ವಾತಾವರಣವನ್ನು ರಾಷ್ಟ್ರೀಯ ಮಟ್ಟಕ್ಕೆ ಹೋಲಿಸಿದರೆ ಅತಿ ಚಳಯೂ ಅಲ್ಲದ ಅತಿ ಉಷ್ಣತೆಯೂ ಅಲ್ಲದ ಹಿತಕರವಾದ ವಾಯುಗುಣವನ್ನು ಹೊಂದಿದೆ. ಉಷ್ಣತೆ ಅತಿಯಾಗಿ ಏರುವುದಾಗಲಿ ಇಳಿಯುವುದಾಗಲಿ ಕಂಡು-ಬರುವುದಿಲ್ಲ. ಚಳಿಗಾಲದಲ್ಲಿ ಚಳಿಯಿದ್ದು ಮಳೆಗಾಲದಲ್ಲಿ ಮಳೆ ಸುರಿದರೆ ಬೇಸಿಗೆಯಲ್ಲಿ ಬಿಸಿಲು ಇರುತ್ತದೆ. ಹಾಗಾಗಿ ಇಲ್ಲಿನ ವಾತಾವರಣವನ್ನು ಗುರುತಿಸುವಂತಹ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಬೇಸಿಗೆಯಲ್ಲಿ ಇದರ ಉಷ್ಣಾಂಶ ೨೬ ಡಿಗ್ರಿ ಇರುತ್ತದೆ. ಮೇ ತಿಂಗಳ ಅನಂತರದ ಕೆಲವು ಸಲ ಗುಡುಗುನಿಂದ ಕೂಡಿದ ಮಳೆ ಸುರಿಯುತ್ತದೆ. ಸಾಮಾನ್ಯವಾಗಿ ಈ ಅವಧಿಯಲ್ಲಿ ಸಂಜೆ ವೇಳೆಗೆ ಆಲೀಕಲ್ಲು ಮಳೆ ಬೀಳುವ ಸಂಭವ ಇರುತ್ತದೆ. ಇನ್ನು ಮಳೆಗಾಲದಲ್ಲಿ ನೈಋತ್ಯ ಮಾನ್ಸೂನ್ ಮಾರುತಗಳು ಜೂನ್ ತಿಂಗಳಿನಿಂದ ಅಕ್ಟೋಬರ್ ತಿಂಗಳವರೆಗೆ

ಮುಂದುವರೆಯುತ್ತದೆ. ಈ ಕಾಲದಲ್ಲಿ ಆಕಾಶವು ಮೋಡಗಳಿಂದ ಆವರಿಸಿ ಭಾರಿ ಮಳೆ ಸುರಿಯುತ್ತದೆ. ಇನ್ನು ಚಳಿಗಾಲದಲ್ಲಿ ಆಕಾಶವು ಶುಭ್ರವಾಗಿದ್ದು ಮಳೆ ಮೋಡಗಳು ಅಷ್ಟಾಗಿ ಕಾಣಿಸುವುದಿಲ್ಲ. ಕಡಿಮೆ ಉಷ್ಣತೆ ಇದ್ದು ಸುಖೋಷ್ಣತೆ ಇರುತ್ತದೆ. ಜನವರಿ, ಫೆಬ್ರವರಿ ಸಮಯದಲ್ಲಿ ೧೮$^0$C ರಷ್ಟು ಸಾಧಾರಣ ಉಷ್ಣಾಂಶ ಕಂಡುಬರುತ್ತದೆ.

ಇತ್ತೀಚೆಗೆ ವಾಯುಗುಣದಲ್ಲಿ ಏರಿಳಿತವಾಗಿದ್ದು ನವೆಂಬರ್-ಜನವರಿ ತಿಂಗಳಿನಲ್ಲಿ ಮಳೆ ಸುರಿಯುವುದಿಲ್ಲವಾದರೂ ಕೆಲವೊಮ್ಮೆ ಸಮುದ್ರದ ಚಂಡಮಾರುತದ ಪರಿಣಾಮದಿಂದಾಗಿ ತುಂತುರು ಹನಿಗಳು ಬೀಳುವ ಸಂಭವ ಇರುತ್ತದೆ. ಹಿಂದಿನಂತೆ ದಟ್ಟವಾದ ಕಾಡಿಲ್ಲದ ಕಾರಣದಿಂದಾಗಿ, ಪ್ರಕೃತಿಯ ಏರುಪೇರುಗಳಿಂದಾಗಿ ಮಳೆ ತೀರ ಕಡಿಮೆಯಾಗಿದೆ. ವರ್ಷದ ಹನ್ನೆರಡು ತಿಂಗಳನ್ನು ಮಳೆಗಾಲ, ಬೇಸಿಗೆಕಾಲ, ಚಳಿಗಾಲ ಎಂಬುದಾಗಿ ವಿಂಗಡಿಸಿದ್ದರೂ ಇತ್ತೀಚೆಗೆ ಈ ಮೂರು ಕಾಲಘಟ್ಟದಲ್ಲಿ ಅಪಾರ ವ್ಯತ್ಯಾಸಗಳಿವೆ. ಹಿಂದೆ ವರ್ಷದ ಏಳೆಂಟು ತಿಂಗಳುಗಳ ಕಾಲ ಮಳೆ ಸುರಿದರೆ ಇಂದು ಆ ಪ್ರಮಾಣ ಕಡಿಮೆಯಾಗಿದೆ. ಇಲ್ಲಿನ ಬಹುಪಾಲು ಜನರು ಮಳೆಯನ್ನೇ ಆಶ್ರಯಿಸಿದ್ದಾರೆ.

**ಭೂಮಿಯ ಲಕ್ಷಣ:**

ಕಬ್ಬತ್ತಿ ಗ್ರಾಮವು ವ್ಯವಸಾಯಕ್ಕೆ ಬೇಕಾದ ಫಲವತ್ತಾದ ಮತ್ತು ಸಮತಟ್ಟಾದ ಮೈದಾನ ಪ್ರದೇಶವನ್ನು ಹೊಂದಿದ್ದು ಇಲ್ಲಿ ಮೂರ್ನಾಲ್ಕು ಗುಣವುಳ್ಳ ಮಣ್ಣು ಇರುವುದರಿಂದ ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲವಾಗಿದೆ. ಇಲ್ಲಿ ಮುಖ್ಯವಾಗಿ ಕೆಮ್ಮಣ್ಣು, ಕಪ್ಪುಮಣ್ಣು, ಮರಳು ಮಿಶ್ರಿತ ಮಣ್ಣು, ಕೊರಕಲ ಮಣ್ಣು ಇಷ್ಟೇ ಅಲ್ಲದೆ ಕೆಲವೆಡೆ ಜೇಡಿಮಣ್ಣು ಕಂಡುಬರುತ್ತದೆ. ಮೇಲಿನ ಮಣ್ಣಿನಲ್ಲಿ ತರಿ, ಖುಷ್ಕಿ, ಭಾಗಾಯಿತು ಎಂಬ ಮೂರು ಬಗೆಯ ವ್ಯವಸಾಯ ಪದ್ಧತಿ ಅಳವಡಿಸಿಕೊಂಡಿದ್ದು, ಮಣ್ಣಿನ ಗುಣಕ್ಕೆ ಅನುಗುಣವಾಗಿ ಬೆಳೆ ಬೆಳೆಯಾಗುತ್ತದೆ. ಮಣ್ಣಿನ ಗುಣ ಸಮಧಾತು-ವಾಗಿದ್ದು ಕೆಲವೆಡೆ ಹುಳಿ ಅಂಶ ಕಂಡು ಬರುತ್ತದೆ. ಈ ಮಣ್ಣಿಗೆ ನೀರು ಬಸಿಯುವ ಶಕ್ತಿ ಇರುವುದರಿಂದ ನೀರಾವರಿಯಂತಹ ಬೆಳೆಬೆಳೆಯಲು ಅನುಕೂಲವಾಗಿದೆ. ಇಲ್ಲಿನ ಮಣ್ಣಿನಲ್ಲಿ ರಸಸಾರ ೫ ರಿಂದ ೬ರವರೆಗೆ ಇರುವುದರಿಂದ ಸಾರಜನಕದ ಪ್ರಮಾಣ ಉತ್ತಮವಾಗಿದೆ. ರಜದ ಮಧ್ಯಮ ಪ್ರಮಾಣದಲ್ಲಿ ವ್ಯವಸಾಯಕ್ಕೆ ಯೋಗ್ಯವಾಗಿದೆ.

**ಬೆಳೆಗಳು:**

ಮಳೆಯಾಧಾರಿತ ಬೇಸಾಯದಲ್ಲಿ ಇಲ್ಲಿನ ರೈತರು ರಾಗಿ, ಜೋಳದಂತಹ ಆಹಾರ ಧಾನ್ಯಗಳನ್ನು, ಅವರೆಕಾಳು, ಹುರುಳಿಕಾಳು, ತೊಗರಿ, ಹುಚ್ಚೆಳ್ಳು ಇನ್ನೂ

ಮೊದಲಾದ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಇವರಿಗೆ ಪ್ರಿಯವಾದ ಬೆಳೆ ಆಲೂಗೆಡ್ಡೆ. ಕೆರೆಯ ಹಿಂದೆ ಜಮೀನು ಇದ್ದವರು ಕಬ್ಬು ಭತ್ತವನ್ನು ಬೆಳೆಯುತ್ತಾರೆ ಕೆರೆ ತುಂಬಿದ್ದರೆ, ನೀರು ಸಾಕಷ್ಟಿದ್ದರೆ ಐನು, ಕಾರು ಎಂದು ಎರಡು ಬೆಳೆಯನ್ನು ತೆಗೆಯುತ್ತಾರೆ. ನೀರಿನ ಪ್ರಮಾಣ ಕಡಿಮೆಯಿದ್ದರೆ ಒಂದು ಬೆಳೆ ಮಾತ್ರ ಬೆಳೆಯುತ್ತಾರೆ. ಕೊಳವೆ ಬಾವಿ ಸೌಕರ್ಯ ಇರುವವರು ಭತ್ತ, ರಾಗಿಗಳಲ್ಲದೆ ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ. ಬದನೆ, ಟೊಮೆಟೋ, ಹುರುಳಿಕಾಯಿ, ಕೋಸು, ಹೀರೆಕಾಯಿ, ಪಡುವಲಕಾಯಿ, ಕುಂಬಳಕಾಯಿ ಇನ್ನೂ ಮೊದಲಾದ ಬಗೆಬಗೆಯ ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ.

**ಸಸ್ಯಸಂಪತ್ತು:**

ಕಬ್ಬತ್ತಿ ಗ್ರಾಮವು ಬೆಟ್ಟದ ಸಾಲಿನ ಗ್ರಾಮವಾದುದರಿಂದ ಹಲವಾರು ವೈವಿಧ್ಯಮಯ ಮರಗಿಡಗಳು ಬೆಳೆದಿವೆ. ಸಣ್ಣ ಪುಟ್ಟ ಗಿಡ, ಪೊದೆ, ಗುಲ್ಮಗಳೂ ಇವೆ. ಇಲ್ಲಿನ ಸಸ್ಯ ಸಂಪತ್ತನ್ನು ಎರಡು ವಿಧವಾಗಿ ವಿಂಗಡಿಸಿಕೊಳ್ಳಬಹುದು.

೧) ಸ್ವಾಭಾವಿಕ ಸಂಪತ್ತು,

೨) ಮನುಷ್ಯ ನಿರ್ಮಿತ ಸಂಪತ್ತು

ಹೂವಿನ ಗಿಡಗಳು ಅಂದರೆ ಮಲ್ಲಿಗೆ, ಗುಲಾಬಿ, ಕನಕಾಂಬರ, ದಾಸವಾಳ, ಬೆಟ್ಟದಾವರೆ, ಪಟಿಕ ಮೊದಲಾದವುಗಳು. ಸೀಬೆಹಣ್ಣಿನ ಮರ, ದಾಳಿಂಬೆಮರ, ಸಪೋಟಮರ, ನಿಂಬೆಮರ, ಚಕೋತ ಮರ, ಬಾಳೆಮರ, ಪರಂಗಿಮರ ಮೊದಲಾದ ಹಣ್ಣಿನ ಗಿಡಮರಗಳು. ಇವುಗಳ ಜೊತೆಗೆ ಕರಿಬೇವು, ಆಲದಮರ, ಹಲಸಿನಮರ, ಬೇಲದಮರ, ಬಸುರೀಮರ, ನೀಲಗಿರಿಮರ, ತೆಂಗಿನಮರ ಮೊದಲಾದವುಗಳು ಮಾನವ ನಿರ್ಮಿತ ಸಂಪತ್ತಾಗಿದೆ.

ಬೆಟ್ಟದ ಪ್ರದೇಶದ್ಲಲಿ ಅರಳೀಮರ, ಮತ್ತಿಗಿಡ, ಹೊಂಗೆಮರ, ಬೇವಿನಮರ, ಗೊಬ್ಬಳಿಮರ, ಮಡ್ಡಿ, ಚುಚ್ಚಲು ಇನ್ನೂ ಮೊದಲಾದ ಹೆಸರುಗೊತ್ತಿಲ್ಲದ ಹಲವಾರು ವೃಕ್ಷಗಳು ಸ್ವಾಭಾವಿಕವಾಗಿ ಹುಟ್ಟಿವೆ.

ಮಳೆಗಾಲದಲ್ಲಿ ಹೊಲ, ಬಯಲುಗಳಲ್ಲಿ ಬೆಳೆಯುವ ಸಣ್ಣ ಗಿಡಗಳು, ಕಳೆಸಸ್ಯಗಳು ಪ್ರಾಣಿಗಳಿಗೆ ಮೇವಾಗಿವೆ. ಕೆಲವೊಂದು ಬಗೆಯ ಸೊಪ್ಪುಗಳು ಉತ್ಕೃಷ್ಟ ಪೌಷ್ಠಿಕಾಂಶ ಹೊಂದಿದ್ದು ಮನುಷ್ಯರಿಗೂ ಆಧಾರವಾಗುತ್ತವೆ. ಇವುಗಳಲ್ಲಿ ಕೀರೆಸೊಪ್ಪು, ದಂಟಿನಸೊಪ್ಪು, ಗಣಿಕೆಸೊಪ್ಪು, ಹೊನಗೊನೆಸೊಪ್ಪು ಇನ್ನೂ ಮುಂತಾದವು ಮುಖ್ಯವಾದವು.

ಇತ್ತೀಚೆಗೆ ಮನೆಮುಟ್ಟುಗಳಿಗಾಗಿ, ಹಣಕ್ಕಾಗಿ ವಿವಿಧ ರೀತಿಯ ಮರಗಳನ್ನು ಜನ ಬೆಳೆಯುತ್ತಿದ್ದಾರೆ. ಅಂತಹ ಮರಗಳೆಂದರೆ ನೀಲಗಿರಿ ಕಕೇಶಿಯಾ, ಹರ್ಕ್ಯುಲೆಸ್ ಮತ್ತು ಸರ್ವೇ ಮರಗಳನ್ನು ವ್ಯಾಪಾರದ ಉದ್ದೇಶಕ್ಕಾಗಿ ಹೆಚ್ಚೆಚ್ಚು ಬೆಳೆಯುತ್ತಿದ್ದಾರೆ. ಮನೆ ಮುಟ್ಟುಗಳಿಗಾಗಿ ಮಾವು, ಬೇವು, ಹಲಸು, ಮರಗಳು ಬೇಕಾಗಿದ್ದು ಈಗ ಅವುಗಳ ಸ್ಥಾನವನ್ನು ನೀಲಗಿರಿ, ಗೊಬ್ಬಳಿ, ಸರ್ವೆ ಮರಗಳು ಆಕ್ರಮಿಸಿಕೊಂಡಿವೆ. ಇವುಗಳೇ ಅಲ್ಲದೆ ಆಡುಸೋಗೆ, ಅಗಸೆ, ಅಂಜೂರ, ಹತ್ತಿ, ಬನ್ನಿ, ಬೇಲ, ಬಿಲ್ವಪತ್ರೆ, ಚಕ್ಕೋತ, ದತ್ತೂರಿ, ಎಕ್ಕ, ಗಜನಿಂಬೆ, ಗೇರು, ಗೋರಂಟಿ, ಗುಲ್‌ಮೊದರ್, ಹುಣಸೆ, ಇಪ್ಪೆ, ಕಿರುನೆಲ್ಲಿ, ಮುತ್ತುಗ, ಕಣಗಲೆ, ನಂದಿ, ನೇರಳೆ, ಸೆಣಬು, ಸೀಗೆ, ಶ್ರೀಗಂಧ, ಸುರಹೊನ್ನೆ ಇನ್ನೂ ಮುಂತಾದ ಗಿಡಬಳ್ಳಿ ಮರಗಳಿವೆ.

ಅಮೃತಬಳ್ಳಿ, ಅಳಲೆ, ಅರಿಸಿನ, ದೊಡ್ಡಿಪತ್ರೆ, ಪುದಿನ, ಶಂಕಪುಷ್ಪಿ, ಸೋಗದೆಬೇರು, ತುಂಬೆ, ಗರುಗ, ಉತ್ತರಾಣಿ, ಉಗಣಿ ಇನ್ನೂ ಇತರೆ ಔಷಧಿಯುಕ್ತ ಗಿಡಬಳ್ಳಿಗಳಿವೆ.

**ಪ್ರಾಣಿಪಕ್ಷಿಗಳು:** ಕಬ್ಬತ್ತಿ ಗ್ರಾಮದಲ್ಲಿ ನಿಸರ್ಗದಲ್ಲಿನ ಪ್ರಾಣಿಪಕ್ಷಿಗಳು ಮನುಷ್ಯನ ಬದುಕಿನ ಅನಿವಾರ್ಯ ಅವಿಭಾಜ್ಯ ಅಂಗಗಳಾಗಿವೆ. ಈ ಪ್ರಾಣಿ – ಪಕ್ಷಿಗಳನ್ನು ಪ್ರಮುಖವಾಗಿ ಎರಡು ಭಾಗಗಳಾಗಿ ವಿಂಗಡಿಸಿ ನೊಡಬಹುದು.

೧) ಸಾಕು ಪ್ರಾಣಿಗಳು

೨) ಸಾಕು ಪ್ರಾಣಿಗಳಲ್ಲದವು

ಈ ಗ್ರಾಮದಲ್ಲಿ ಒಕ್ಕಲಿಗರು ಹರಿಜನರು, ನಯನಜ ಕ್ಷತ್ರಿಯರು, ಮಡಿವಾಳರು ವ್ಯವಸಾಯ ಮತ್ತು ವ್ಯವಸಾಯದ ಕೂಲಿ ಕೆಲಸವನ್ನು ಅವಲಂಬಿಸಿದ್ದಾರೆ. ಇದರಿಂದ ದನ, ಎಮ್ಮೆ, ಕುರಿ, ಮೇಕೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಸಾಕುತ್ತಿದ್ದಾರೆ. ದನ ಎತ್ತುಗಳು ವ್ಯವಸಾಯದ ಕೆಲಸ, ಹಾಲು–ಹೈನು, ಗೊಬ್ಬರಗಳಿಗಾಗಿ, ಕುರಿ–ಮೆಕೆಗಳು ತುಪ್ಪಳ, ಚರ್ಮ ಮತ್ತು ಮಾಂಸಕ್ಕಾಗಿ ಸಾಕುತ್ತಾರೆ. ವ್ಯವಸಾಯದಲ್ಲಿ ಈಗ ಟ್ರ್ಯಾಕ್ಟರ್‌ಗಳ ಪಾತ್ರ ಹೆಚ್ಚಾಗಿರುವುದರಿಂದ ಎತ್ತುದನಗಳ ಸಂಖ್ಯೆ ಕಡಿಮಯಾಗುತ್ತಿದೆ. ಎತ್ತಿನ ಗಾಡಿಯ ಪ್ರಯಾಣಕ್ಕೂ ಇವುಗಳನ್ನು ಬಳಸುತ್ತಿದ್ದು, ಮೋಟಾರು– ವಾಹನಗಳ ಸಂಖ್ಯೆ ಹೆಚ್ಚಿಪ್ರಯಾಣ ಸುಧಾರಿಸುತ್ತಿರುವುದರಿಂದ ಈಗ ಈ ಗಾಡಿಗಳೂ ಮೂಲೆ ಸೇರುತ್ತಿವೆ. ಹೆಚ್ಚು ಹಾಲು ನೀಡುವ ತಳಿ ಹಸುಗಳು ಬಂದ ಮೇಲೆ ನಾಟಿ ಹಸುಗಳ ಬಳಕೆ ಕಡಿಮೆಯಾಗುತ್ತಿದೆ.

ಪಕ್ಷಿಗಳಲ್ಲಿ ಮಾಂಸಾಹಾರಿಗಳು ಪ್ರಮುಖವಾಗಿ ಸಾಕಿಕೊಳ್ಳುವುದು ಕೋಳಿ ಮತ್ತು ಪಾರಿವಾಳವನ್ನು. ಜನತಾ ಪಕ್ಷಿಯಾಗಿರುವ ಕೋಳಿಯನ್ನು ಅಪರೂಪದ ನೆಂಟರು

ಬಂದಾಗ ಹಬ್ಬಹರಿದಿನಗಳು ಬಂದಾಗ ಕುಯ್ದುಕೊಂಡು ಸಾರು ಮಾಡಿಕೊಳ್ಳುತ್ತಾರೆ. ಪಕ್ಷಿಲೋಕದಲ್ಲಿ ಪ್ರಮುಖವಾಗಿ ಗುಬ್ಬಿ, ಕಾಗೆ, ಗೂಬೆ, ಹದ್ದು, ಗಿಳಿ, ಗೊರವಂಕ, ಗರುಡ, ಕೊಕ್ಕರೆ, ಗೀಜುಗನ ಹಕ್ಕಿ ಮುಂತಾದ ಪಕ್ಷಿಗಳಿವೆ. ಕೆಲವು ಸಣ್ಣಗಾತ್ರದ ಹಕ್ಕಿಗಳಿದ್ದು ವೈವಿದ್ಯಮಯದ ಬಣ್ಣದ ರೆಕ್ಕೆಗಳನ್ನು ಒಳಗೊಂಡಿವೆ. ಅವುಗಳ ಹೆಸರು ತಿಳಿದುಬಂದಿಲ್ಲ. ಕಾಗೆ, ಗೂಬೆಗಳ ಬಗ್ಗೆ ತಿರಸ್ಕಾರದ ಭಾವನೆಯಿದೆ. ಪ್ರಾಣಿಗಳು ಸತ್ತಾಗ ಹದ್ದು, ಗರುಡಗಳು ಬರುತ್ತವೆ. ಗೀಜುಗನ ಹಕ್ಕಿಗೆ ಬಲೆಹಾಕಿ ಹಿಡಿದು ತಿನ್ನುತ್ತಾರೆ. ಪಾರಿವಾಳ, ಹಂಸ, ರಣಹದ್ದು, ಮರಕುಟುಗ, ಮಿಂಚುಳ್ಳಿ, ಗುಬ್ಬಚ್ಚಿ, ಮೈನಾ, ನೇಯ್ಗೆ ಹಕ್ಕಿ ಇತ್ಯಾದಿ ಈ ಹಕ್ಕಿಗಳನ್ನು ಅಪರೂಪಕ್ಕೆ ನೋಡಬಹುದಾಗಿದೆ.

**ಜಲಸಂಪತ್ತು:**

ಕಬ್ಬತ್ತಿ ಗ್ರಾಮವು ಎತ್ತರವಾದ ಪ್ರದೇಶದಲ್ಲಿ ನಿರ್ಮಾಣವಾಗಿರುವುದರಿಂದ ಅಂತರ್ಜಲದ ಪ್ರಮಾಣ ಸಾಧಾರಣವಾಗಿದೆ. ಸಾರ್ವಜನಿಕರ ಕುಡಿಯುವ ನೀರಿನ ಸೌಲಭ್ಯ ಒದಗಿಸಲು ಸರ್ಕಾರ ಕೊಳವೆ ಬಾವಿಗಳನ್ನು ಕೊರೆದಿದೆ. ಕಿರು ನೀರು ಸರಬರಾಜು ಯೋಜನೆಯ ಟ್ಯಾಂಕುಗಳು ನಿರ್ಮಾಣವಾಗಿವೆ. ಊರಲ್ಲಿರುವ ಕೊಳಗಳಲ್ಲಿ ವರ್ಷದ ಎಲ್ಲಾ ಕಾಲವೂ ನೀರು ಇರುತ್ತದೆ.

ಈ ಗ್ರಾಮವು ಮಳೆ ಆಧಾರಿತ ಪ್ರದೇಶವಾದ್ದರಿಂದ ಬೆಟ್ಟಗುಡ್ಡಗಳ ಮೇಲೆ ಬಿದ್ದ ನೀರನ್ನು ವ್ಯವಸ್ಥಿತವಾಗಿ ಸಂಗ್ರಹಿಸಿಕೊಳ್ಳಲು ಕೊಳಗಳನ್ನು ನಿರ್ಮಿಸಿ ನಮ್ಮ ಪೂರ್ವಿಕರು ತಮ್ಮ ಬುದ್ಧಿವಂತಿಕೆಯನ್ನು ಪ್ರದರ್ಶಿಸಿ ಮಳೆ ನೀರಿನ ಸಂಗ್ರಹಕ್ಕಾಗಿ ಬೆಟ್ಟದ ಮೇಲಿಂದ ಹಂತ ಹಂತವಾಗಿ ನೀರು ಸಂಗ್ರಹವಾಗುವ ಕಡೆಗಳಲೆಲ್ಲಾ ಕೊಳಗಳನ್ನು ನಿರ್ಮಿಸಿದ್ದಾರೆ. ಹೀಗೆ ಪ್ರಾಣಿ–ಪಕ್ಷಿ, ಮಾನವರಿಗೆ ದಿನನಿತ್ಯದ ಬದುಕಿಗೆ ಬೇಕಾದ ಅವಶ್ಯಕವಾದ ನೀರು ಲಭ್ಯವಾಗಿದೆ. ಬೇಸಾಯಕ್ಕೆ ಕೆರೆಯೊಂದಿದ್ದು ಸ್ವಲ್ಪ ಪ್ರಮಾಣದಲ್ಲಿ ನೀರನ್ನು ಒದಗಿಸುತ್ತದೆ. ಈ ಗ್ರಾಮಕ್ಕೆ ಹೇಮಾವತಿ ಜಲಾಶಯದ ನೀರನ್ನು ಏತನೀರಾವರಿಯ ಮೂಲಕ ತರಲು ಪ್ರಯತ್ನ ನಡೆದಿದ್ದು ಆ ಭಾಗ್ಯ ಇನ್ನು ಸಿಕ್ಕಿಲ್ಲ.

ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ರೈತರು ವ್ಯವಸಾಯಕ್ಕೆ ಕೊಳವೆಬಾವಿ ಕೊರೆಯಿಸಿ ಅಂತರ್ಜಲದಿಂದ ಬೇಸಾಯ ಮಾಡುತ್ತಿದ್ದಾರೆ. ಆದರೆ ಇವರ ಸಂಖ್ಯೆ ತುಂಬಾ ಕಡಿಮೆಯಿದ್ದು ಶೇ.೧೫ ಮಾತ್ರ ಆಗುತ್ತದೆ. ಉಳಿದಂತೆ ಶೇ.೮೫ರಷ್ಟು ರೈತರು ಮಳೆ ಆಶ್ರಿತವಾದ ಬೇಸಾಯ ನಡೆಸುತ್ತಾರೆ. ಮೊದಲೇ ಲಾಭದಾಯಕವಲ್ಲದ ವ್ಯವಸಾಯ ಮಳೆಯ ಅನಿಶ್ಚಿತತೆಯ ಕಾರಣ ರೈತರನ್ನು ಇನ್ನು ಹೆಚ್ಚಿನ ನಷ್ಟದಲ್ಲಿ ಸಿಕ್ಕಿಸುತ್ತಿದೆ. ಲಾಭ ನಷ್ಟದ ಲೆಕ್ಕ ವ್ಯವಸಾಯದಲ್ಲಿ ಹಾಕಲಾಗದ್ದರಿಂದ ತಲೆ–ತಲಾಂತರದಿಂದ ಬೇಸಾಯದಲ್ಲಿ ಬಂದಿರುವ ಕುಟುಂಬಗಳು ಬೇರೇನೂ ಕಸಬು ಗೊತ್ತಿಲ್ಲದ ಕುಟುಂಬಗಳು ಈ ವ್ಯವಸಾಯವನ್ನು ಮುಂದುವರೆಸಿಕೊಂಡು ಹೋಗುತ್ತಿವೆ.

**ಮಳೆ:** ಭೂಮಿಯನ್ನೇ ನಂಬಿ ಬದುಕುತ್ತಿರುವ ಕಬ್ಬತ್ತಿ ಗ್ರಾಮದ ರೈತರಲ್ಲಿ ಶೇಕಡ ೮೦ರಷ್ಟು ರೈತರು ಮಳೆಯನ್ನೇ ಆಶ್ರಯಿಸಿ ಬದುಕುತ್ತಿದ್ದಾರೆ. ಹೇಮಾವತಿ ಅಣೆಕಟ್ಟು ಇದ್ದರೂ ಇಲ್ಲಿನ ರೈತರಿಗೆ ಅಣೆಕಟ್ಟೆಯಿಂದ, ನದಿಯಿಂದ ಇಲ್ಲಿನ ರೈತರಿಗೆ ಪ್ರಯೋಜನ ಇಲ್ಲದಿರುವುದರಿಂದ ಬೆಳೆ ಬೆಳೆಯಲು ಯಾವುದೇ ನೀರಾವರಿ ಸೌಲಭ್ಯವಿಲ್ಲ. ಕಾಲಕ್ಕೆ ತಕ್ಕಂತೆ ಮಳೆಯಾದರೆ ರೈತರ ಸಂತೊಷಕ್ಕೆ ಪಾರವೇ ಇಲ್ಲ. ಒಂದು ವೇಳೆ ಸರಿಯಾಗಿ ಮಳೆ ಸುರಿಯದಿದ್ದರೆ ಅವರ ಹಾಹಾಕಾರ ಹೇಳತೀರದು. ಕಣ್ಣೀರು ಸುರಿಸುತ್ತಾ ಮಳೆ ದೇವನಿಗೆ ಶಾಪಹಾಕುತ್ತಾ ಮುಗಿಲು ಕಡೆಗೆ ಬೀಳುವ ಮಳೆ ಹನಿಗಾಗಿ ತಲ್ಲಣಿಸುತ್ತಾರೆ.

ಸಾಮಾನ್ಯವಾಗಿ ಹಿಂದೆ ಮಾರ್ಚ್ ತಿಂಗಳಿನಿಂದಲೇ ಮಳೆ ಆರಂಭವಾಗುತ್ತಿತ್ತು. ಅಶ್ವಿನಿ, ಭರಣಿ, ರೋಹಿಣಿ, ಮೃಗಶಿರಾ, ಆರಿದ್ರಾ, ಪುನರ್ವಸು, ಪುಷ್ಯ, ಆಶ್ಲೇಷ, ಮಖಾ, ಹುಬ್ಬಾ, ಉತ್ತರಾ, ಹಸ್ತ, ಚಿತ್ತಾ, ಸ್ವಾತಿ, ವಿಶಾಖಾ, ಅನುರಾಧ, ಜೇಷ್ಠ, ಮೂಲಾ, ಪೂರ್ವಷಾಡ, ಉತ್ತರಾಷಾಡಾ, ಶ್ರವಣ, ಷಷ್ಠ, ಶತಬಿಷಾ, ಪೂರ್ವಭಾದ್ರ, ಉತ್ತರಭಾದ್ರ ಮತ್ತು ರೇವತಿಯವರೆಗೆ ಇಪ್ಪತ್ತೇಳು ಮಳೆ ನಕ್ಷತ್ರಗಳಿದ್ದರೂ ಅಶ್ವಿನಿಯಿಂದ ಸ್ವಾತಿಯವರೆಗಿನ ಮಳೆಗಳು ಮಾತ್ರ ರೈತರಿಗೆ ಸಹಾಯಕವಾಗಿ ನಿಲ್ಲುತ್ತವೆ. ಇಲ್ಲಿನ ಸಾಂಪ್ರದಾಯಿಕ ಮನೋಧರ್ಮದ ರೈತರು ಮಳೆ ನಕ್ಷತ್ರಗಳಿಗನುಗುಣವಾಗಿಯೇ ವ್ಯವಸಾಯ ಆರಂಭಿಸುತ್ತಾರೆ.

ಗ್ರಾಮದ ಜನಪದಲ್ಲಿ ಮಳೆ ನಕ್ಷತ್ರಗಳನ್ನು ಕುರಿತಂತೆ ಕೆಲವು ನಂಬಿಕೆ ಮತ್ತು ಗಾದೆಗಳಿವೆ. 'ಅಶ್ವಿನಿ ಮಳೆಗೆ ಕ್ರಿಮಿಕೀಟಗಳೇ ನಾಶವಾಗುತ್ತವೆ.' 'ಭರಣಿ ಮಳೆ ಸುರಿದರೆ ಧರಣಿಯೆಲ್ಲ ಬಂಗಾರ' ಎಂಬ ಗಾದೆಗಳು ಅವರ ಅನುಭವದ ಮಾತುಗಳೇ ಆಗಿವೆ. ಅಶ್ವಿನಿ ಮಳೆ ವರ್ಷದ ಆರಂಭದ ಮಳೆ. ಈ ಮಳೆಯಲ್ಲಿ ಉಳುಮೆ ಮಾಡಿ ಅಚ್ಚುಕಟ್ಟುಗೊಳಿಸಿಕೊಳ್ಳಲಾದ ಜಮೀನಿಗೆ ಭರಣಿ ಮಳೆ ಸುರಿದ ಕೂಡಲೇ ಬೀಜ ಬಿತ್ತಲಾಗುತ್ತದೆ. ಹೀಗಾಗಿ ಈ ಸಂದರ್ಭದಲ್ಲಿ ಜಮೀನನ್ನು ನೋಡಲು ಖುಷಿ-ಯಾಗುತ್ತದೆ. 'ಕೃತ್ತಿಕೆ ಬಾರದಿದ್ರೆ ಬಾಯಿಗೆ ಮಣ್ಣು ಹಾಕಿದಂತೆ' ಎಂಬ ಮಾತು ಭರಣಿ ಮಳೆಯಲ್ಲಿ ಹಾಕಿದ ಬೆಳೆಗೆ ನೀರು ಬೇಕಾಗುತ್ತದೆ. ಒಂದು ವೇಳೆ ಕೃತಿಕೆ ಮಳೆ ಬೀಳದಿದ್ದರೆ ಬಿತ್ತಿದ ಬೀಜಗಳೆಲ್ಲ ನಾಶವಾಗುತ್ತವೆ. ಇದರಿಂದ ಬೀಜ ಹಣ ಎರಡನ್ನು ಕಳೆದುಕೊಂಡು ರೈತರು ಸಂಕಷ್ಟಕ್ಕೆ ಒಳಗಾಗುತ್ತಾರೆ. 'ರೋಣಿ ಮಳೆಗೆ ಓಣಿಯೆಲ್ಲ ಕೆಸರು' ಎಂಬ ಗಾದೆಯಲ್ಲಿ ಹಗಲೆಲ್ಲ ಬಿಡುವು ಕೊಡದೆ ಸೋನೆ ಮಳೆಯಂತೆ ಒಂದೇ ಸಮನೆ ಸುರಿಯುವ ಮಳೆಯ ಪರಿಯನ್ನು ತಿಳಿಸುತ್ತದೆ. ಈ ಸಂದರ್ಭದಲ್ಲಿ ರಸ್ತೆ, ಓಣಿಗಳೆಲ್ಲ ಕೆಸರಿನಿಂದ ಆವರಿಸಿರುತ್ತದೆ. 'ಆರಿದ್ರಾ ಬಂದ್ರೆ ದರಿದ್ರ ಮಾಯ' ಎಂಬ ಗಾದೆ ಮಾತಿನಂತೆ ಈ ಮಳೆ ಚೆನ್ನಾಗಿ ಸುರಿದರೆ ಭರಣಿ ಮಳೆಯಲ್ಲಿ ಹಾಕಿದ ಬೆಳೆಯು ಫಸಲು ಕೈಸೇರುತ್ತದೆ. ಇಲ್ಲದಿದ್ದರೆ ಬೆಳೆ ನಾಶವಾಗುತ್ತದೆ. 'ಪುಷ್ಯಾ ಹುಸಿಯದೆ

ಬರ್ತದೆ' ಎಂಬ ಗಾದೆಯಲ್ಲಿ ಯಾವ ಮಳೆ ತಪ್ಪಿದರೂ ಪುಷ್ಯಾ ಮಾತ್ರ ತಪ್ಪದೇ ಸುರಿಯುತ್ತದೆ ಎಂಬುದು ಜನತೆಯ ಭಾವನೆ.

'ಆಶ್ಲೆ ಮಳೆಗೆ ಸೊಸ್ಲು ಬೆಟ್ಟಕ್ಕೆ ಏರಿದ್ವಂತೆ', ಆಶ್ಲೆ ಮಳೆಗೆ ಸೊಸ್ಲು ತೆಂಗಿನ ಗರಿ ಸೇರ್‍ತಂತೆ' ಎಂಬ ಗಾದೆ ಮಾತುಗಳು ಆಶ್ಲೇಷ ಮಳೆ ಸುರಿಯುವ ಪ್ರಮಾಣವನ್ನು ತಿಳಿಸುತ್ತದೆ. ಇದು ದಪ್ಪ ದಪ್ಪ ಹನಿಯಾಗಿ ಸುರಿಯುವುದರಿಂದ ಕೆರೆಕಟ್ಟೆಗಳೆಲ್ಲ ತುಂಬಿ ನೀರು ದಡ ಸೇರುವುದರಿಂದ ಈ ಸಂದರ್ಭದಲ್ಲಿ ಮೀನುಗಳು ಹೇರಳವಾಗಿ ದೊರೆಯುತ್ತವೆ. ಈ ಹಿನ್ನಲೆಯಲ್ಲಿ ಮೇಲಿನ ಗಾದೆಗಳು ಹೇಳಲ್ಪಟ್ಟಿವೆ. 'ಮಖಾ ಮಳೆಗೆ ಗೌರಮ್ಮ ಮಗೆ ಹೊತ್ಕೊಂಡು ಭೂ ಲೋಕಕ್ಕೆ ಬರ್‍ತಾಳಂತೆ' ಗೌರಿಹಬ್ಬದ ಸಂದರ್ಭದಲ್ಲಿ ಮಖಾ ಮಳೆ ಬೀಳುವುದರಿಂದ ಮೇಳಿನ ಗಾದೆ ಹುಟ್ಟಿಕೊಂಡಿದೆ. ಈ ಮಳೆಯ ಸಂದರ್ಭದಲ್ಲಿ ಆಕಾಶದಲ್ಲಿ ದಟ್ಟವಾದ ಮೋಡವಿದ್ದು ಹೊಗೆಯ ರೂಪದಲ್ಲಿ ಮಳೆ ಬೀಳುವುದರಿಂದ ಅಲ್ಲಲ್ಲಿ ನೀರು ಚೆಲ್ಲಿದಂತೆ ಕಾಣುತ್ತದೆ. ಅದಕ್ಕಾಗಿಯೇ 'ಬಂದ್ರೆ ಮಖೆ ಹೋದ್ರೆ ಹೊಗೆ' ಎಂಬ ಮಾತು ರೂಢಿಯಲ್ಲಿದೆ. 'ಹಸ್ತ ಎತ್ತಿದ ಕೈ' ಎಂಬುದು ಈ ಮಳೆ ಮಾತು ಕೊಟ್ಟಂತೆ ಆಡಿದ ಮಾತಿಗೆ ತಪ್ಪದಂತೆ ಸುರಿಯುತ್ತಿದೆ ಎಂಬುದು ಇಲ್ಲಿನ ರೈತರ ನಂಬಿಕೆ. 'ಚಿತ್ತ ಮಳೆ ಚಿತ್ತ ಕಲಕಿದಂತೆ' ಎಂಬ ಗಾದೆಯಿಂದ ಹಗಲೆಲ್ಲ ಬಿಡದೆ ಸುಯ್ಯೆಂದು ಸುರಿಯುವ ಮಳೆಯಿಂದ ಜನರಿಗಾಗುವ ಬೇಜಾರು ಈ ಮಾತಿನಿಂದ ವ್ಯಕ್ತವಾಗುತ್ತದೆ. 'ಸ್ವಾತಿ ಮಳೆ ಹೇತೇನಂದ್ರೂ ಬಿಡದಂಗೆ' ಸೋನೆ ಮಳೆಯಾದ ಸ್ವಾತಿ ಮಳೆಯ ಸಂದರ್ಭದಲ್ಲಿ ಆಕಾಶದಲ್ಲಿ ಮೋಡ ದಟ್ಟವಾಗಿದ್ದು ದಿನವಿಡೀ ಒಂದು ಕ್ಷಣ ಕೂಡ ಬಿಡುವು ಕೊಡದೆ ಸುರಿಯುವುದರಿಂದ ಆ ದಿನದ ಕೆಲಸ ಕಾರ್ಯಗಳೆಲ್ಲ ಅಸ್ತವ್ಯಸ್ತಗೊಳ್ಳುತ್ತದೆ. ಹೀಗೆ ಒಂದೊಂದು ಮಳೆಗೂ ಒಂದೊಂದು ಗಾದೆ ಮಾತುಗಳಿರುವುದನ್ನು ಗಮನಿಸಿದಾಗ ಅಂದಿನ ಮಳೆಗಾಲ ಕಣ್ಮುಂದೆ ಬರುತ್ತದೆ.

ಈ ಗ್ರಾಮವು ಅರೆ ಮಲೆನಾಡಿನ ಸೆರಗಿನಲ್ಲಿದ್ದರಿಂದ ಭೀಕರ ಬರಗಾಲ ಸಂಭವಿಸಿದ ನಿದರ್ಶನಗಳೇನೂ ಕಂಡು ಬರುವುದಿಲ್ಲ. ಕಾಲಮಾನ ಬದಲಾದಂತೆ ಪ್ರಕೃತಿಯ ವೈಪರೀತ್ಯಾದಿಂದಾಗಿ ಕೆಲವೊಂದು ವ್ಯತ್ಯಾಸಗಳಾಗಿರುವುದನ್ನು ಕಾಣಬಹುದು ಈ ಗ್ರಾಮಕ್ಕೆ ವಾರ್ಷಿಕ ಸರಾಸರಿ ೭೦೦-೮೦೦ ಮಿ.ಮೀರಷ್ಟು ಮಳೆಯ ಪ್ರಮಾಣ ಆಗಿದೆ ಇಲ್ಲಿಯ ಮಳೆಯು ಶೇಕಡ ೯೦ರಷ್ಟು ಮುಂಗಾರು ಮಳೆಗಳಿಂದ ಸುರಿದರೆ ಉಳಿದ ಶೇಕಡ ೧೦ರಷ್ಟು ಹಿಂಗಾರು ಮಾರುತಗಳಿಂದ ಸುರಿಯುತ್ತದೆ.

**ಸಾರಿಗೆ ಸಂಪರ್ಕ:**

ಒಂದು ಪ್ರದೇಶದ ಸರ್ವತೋಮುಖ ಅಭಿವೃದ್ಧಿಯಲ್ಲಿ ಸಾರಿಗೆ ಸಂಪರ್ಕ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಜಿಲ್ಲಾ ಕೇಂದ್ರವಾದ ಹಾಸನಕ್ಕೆ ೨೦ ಕಿ.ಮೀ ದೂರದಲ್ಲಿದೆ. ಈ ಗ್ರಾಮದಲ್ಲಿರುವ ಶ್ರೀರಂಗನಾಥಸ್ವಾಮಿ ಒಕ್ಕಲಿನವರು ಬೆಂಗಳೂರು,

ಮೈಸೂರು ಮೊದಲಾದ ಕಡೆಗಳಲ್ಲಿ ವಾಸವಾಗಿದ್ದು ಇವರು ಜಿಲ್ಲಾ ಕೇಂದ್ರ ಹಾಸನಕ್ಕೆ ಬಂದು ಅಲ್ಲಿಂದ ಈ ಗ್ರಾಮಕ್ಕೆ ತಲುಪಬೇಕಾಗುತ್ತದೆ. ಸಂಕ್ರಾಂತಿ ಹಬ್ಬದ ದಿನದಂದು ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ವಿಶೇಷ ಬಸ್ಸುಗಳನ್ನು ಓಡಿಸುತ್ತದೆ. ಈ ಸಂದರ್ಭದಲ್ಲಿ ಕರ್ನಾಟಕದ ಹಲವು ಭಾಗಗಳಿಂದಲ್ಲದೆ, ದೇಶದ ಬೇರೆ ಬೇರೆ ರಾಜ್ಯಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಈ ಸಂದರ್ಭದ್ಲಲಿ ಆಗಮಿಸುತ್ತಾರೆ. ಇನ್ನಿತರ ದಿನಗಳು ಸರ್ಕಾರಿ, ಖಾಸಗಿ ಬಸ್ಸುಗಳು ಸಂಚರಿಸುತ್ತವೆ. ಇವುಗಳ ಜತೆಗೆ ಪ್ರತಿನಿತ್ಯ ಹಲವಾರು ಪ್ರವಾಸಿ ವಾಹನಗಳು ಬಂದು ಹೋಗುತ್ತವೆ.

**ಜನಸಂಖ್ಯೆ:**

ಸುದೀರ್ಘವಾದ ಇತಿಹಾಸವನ್ನು ಹೊಂದಿರುವ ಈ ಗ್ರಾಮವು ಚಂಗಾಳ್ವರು, ಹೊಯ್ಸಳರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದರೂ ಇತ್ತೀಚೆಗೆ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಂಡು ಅಭಿವೃದ್ಧಿಯತ್ತ ಹೆಜ್ಜೆಹಾಕುತ್ತಿದೆ. ಶೇ. ೯೦ರಷ್ಟು ಮೂಲೊಕ್ಕಲುಗಳು ಇದ್ದರೆ ಶೇ. ೧೦ರಷ್ಟು ಸೇರೋಕ್ಕಲಿನವರು ಇದ್ದಾರೆ. ಇತ್ತೀಚಿನ ಜನಗಣತಿಯ ಪ್ರಕಾರ ಒಟ್ಟು ೧೦೫೦ ಜನಸಂಖ್ಯೆಯಿದ್ದು ಇದರಲ್ಲಿ ೫೫೦ ಸ್ತ್ರೀಯರಿದ್ದು ೫೦೦ ರಷ್ಟು ಪುರುಷರಿದ್ದಾರೆ. ಪುರುಷರಿಗಿಂತ ಮಹಿಳೆಯರ ಪ್ರಮಾಣವೇ ಹೆಚ್ಚಾಗಿದೆ.

**ಚಾರಿತ್ರಿಕ ಹಿನ್ನಲೆ**

ಮಾನವನ ಬದುಕಿನ ಆರಂಭದಿಂದ ಪಸ್ತುತದವರೆಗಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಹಿತ್ಯಿಕ ಮುಂತಾದ ಕ್ಷೇತ್ರಗಳಲ್ಲಿನ ಸಾಧನೆ ಮತ್ತು ವೈಫಲ್ಯಗಳನ್ನು ಕಾಲಾನುಕ್ರಮದಲ್ಲಿ ಕ್ರೋಢೀಕರಿಸುವ ಕಾರ್ಯಗಳನ್ನು ಇತಿಹಾಸ ಮಾಡುತ್ತದೆ. ಗತಕಾಲದ ಮಾನವ ಜೀವನ ವೃತ್ತಾಂತದ ಎಳೆಯನ್ನು ವರ್ತಮಾನ ಕಾಲದೊಂದಿಗೆ ಬೆಸೆಯುವ ಇತಿಹಾಸ ವರ್ತಮಾನ ಕಾಲವು ರೂಪುಗೊಂಡಿರುವ ಬಗೆಯನ್ನು ಅರಿಯಲು ಮುಖ್ಯ ಆಕರ. ಇತಿಹಾಸವು ಇಂದು ಅನೇಕ ಶಿಸ್ತುಗಳೊಡನೆ ನಿಕಟವಾದ ಸಂಬಂಧವನ್ನು ಹೊಂದಿರುವುದರಿಂದ ನಡೆದ ಘಟನೆಗಳನ್ನು ಹಲವು ಅಯಾಮಗಳ ಕ್ಷ-ಕಿರಣದ ಮೂಲಕ ಪರಿಶೀಲಿಸಿ ತೋರಿಸುವ ಅಧ್ಯಯನವಾಗಿದೆ. ಇದರಿಂದ ಘಟನೆಗಳ ಅರ್ಥಪೂರ್ಣ ವಿವರಣೆಯನ್ನು ಖಚಿತವಾಗಿ ನೀಡಲು ಸಾಧ್ಯ. ಸ್ಥಳ ಕೇಂದ್ರಿತ ಅಧ್ಯಯನಗಳ ಮೂಲಕ ಒಂದು ನಿರ್ದಿಷ್ಟ ಪ್ರದೇಶದ ಇತಿಹಾಸವನ್ನು ಅತ್ಯಂತ ಆಳವಾಗಿ, ಸಮಗ್ರವಾಗಿ ಪರಿಶೀಲಿಸಲು ಸಾಧ್ಯವಾಗುತ್ತದೆ.

ಒಂದು ಪ್ರದೇಶ ಅಥವಾ ಒಂದು ಊರಿನ ಚಾರಿತ್ರಿಕ ಅಂಶಗಳನ್ನು ನಿಖರವಾಗಿ ಕಂಡುಹಿಡಿಯಲು ಅನೇಕ ಮಾಹಿತಿ ಮೂಲಗಳನ್ನು ಅವಲಂಭಿಸಬೇಕು. ಕಾಲಗರ್ಭದಲ್ಲಿ ಹುದುಗಿ ಹೋದ ಇತಿಹಾಸದ ಕೊಂಡಿಗಳಿಗಾಗಿ ಶಿಲಾಶಾಸನಗಳು,

ಸಾಹಿತ್ಯ ಕೃತಿಗಳು, ನಾಣ್ಯಗಳು, ಕೈಫಿಯತ್ತುಗಳು, ವಿದೇಶಿ ಯಾತ್ರಿಕರ ಬರಹಗಳು, ಐತಿಹ್ಯ–ಪುರಾಣಗಳು ಹಸ್ತಪ್ರತಿಗಳು ಕಲಾಕೃತಿಗಳು ಪ್ರಾಚ್ಯವಸ್ತು ಸಂಶೋಧನ ವರದಿಗಳನ್ನು ಆಧರಿಸುವುದು ಅನಿವಾರ್ಯ. ಈ ಎಲ್ಲಾ ಬಗೆಯ ಆಧಾರ ಸಾಮಗ್ರಿಗಳಿಂದ ಅಧ್ಯಯನ ಕೇಂದ್ರವಾದ ಕಬ್ಬತ್ತಿ ಗ್ರಾಮದ ಐತಿಹಾಸಿಕ ಪರಂಪರೆಯನ್ನು ಕಟ್ಟಿಕೊಡುವ ಕಾರ್ಯವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ವಿಶಿಷ್ಟ ಸಾಂಸ್ಕೃತಿಕ ಸಂಪತ್ತನ್ನು ಹೊಂದಿರುವ ಕಬ್ಬತ್ತಿ ಗ್ರಾಮದ ಪ್ರಾಗೈತಿಹಾಸಿಕ ವಿವರಗಳನ್ನು ನಿಖರವಾಗಿ ಗುರುತಿಸುವುದು ಕಷ್ಟ. ಈ ಗ್ರಾಮದ ಬಗ್ಗೆ ಸ್ಪಷ್ಟ ಮಾಹಿತಿಗಳು ಹೊಯ್ಸಳರ ಕಾಲದಿಂದ ಮಾತ್ರ ದೊರಕುತ್ತದೆ. ಅದಕ್ಕೆ ಹಿಂದೆ ಯಾವ ಯಾವ ಕಾಲಘಟ್ಟದಲ್ಲಿ ಯಾವ ಯಾವ ಅರಸು ಮನೆತನಗಳು ಈ ಪ್ರದೇಶವನ್ನು ಆಳಿದ್ದಾರೆ ಎನ್ನುವುದನ್ನು ಗುರುತಿಸುವುದು ಕಷ್ಟಸಾಧ್ಯ. ಆದರೆ ಇತಿಹಾಸ ಪೂರ್ವಕ್ಕಾಗಲೇ ಒಂದು ಊರಾಗಿ ರೂಪುಗೊಂಡಿತ್ತು ಎನ್ನುವುದಕ್ಕೆ ಇಲ್ಲಿನ ಮಣ್ಣಿನ ಪದರುಗಳು, ಬೆಟ್ಟಗುಡ್ಡಗಳು, ಸಾಕಷ್ಟು ಪುರಾವೆ ಒದಗಿಸುತ್ತದೆ.

ಈ ಗ್ರಾಮವನ್ನು ಕದಂಬರು, ಗಂಗರು, ರಾಷ್ಟ್ರಕೂಟರು, ಚಾಲುಕ್ಯರು ಆಳ್ವಿಕೆ ನಡೆಸಿದ್ದಾರೆ ಎಂಬುದಕ್ಕೆ ಆಧಾರಗಳು ಸಿಗುವುದಿಲ್ಲ. ಆದರೆ ಹೊಯ್ಸಳರು, ಚಂಗಾಳ್ವರು ಆಳ್ವಿಕೆ ನಡೆಸಿದ್ದಾರೆ ಎಂಬುದಕ್ಕೆ ಮಾಹಿತಿ ಸಿಗುತ್ತದೆ.

**ಚಂಗಾಳ್ವರು:** ಚಂಗಾಳ್ವರು ಹೇಮಾವತಿ ನದಿ ತೀರದ ಪ್ರದೇಶಗಳ ಮೇಲೆ ತಮ್ಮ ಆಡಳಿತ ಸ್ಥಾಪಿಸಿದ್ದರು ಎಂಬುದರ ಮೇಲೆ ಇವರ ಆಡಳಿತಕ್ಕೆ ಒಳಪಟ್ಟಿತ್ತು ಈ ಗ್ರಾಮ ಎಂದು ನಂಬಬಹುದು. ಆದರೆ ಇವರ ಬಗೆಗಿನ ಆಳ್ವಿಕೆಯ ಕಾಲವನ್ನು ನಿಖರವಾಗಿ ಹೇಳಲು ಆಧಾರಗಳಿಲ್ಲ.

**ಹೊಯ್ಸಳರು:** ಹನ್ನೊಂದನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಹೊಯ್ಸಳ ವಂಶೀಯರು ಕರ್ನಾಟಕ ಇತಿಹಾಸಕ್ಕೆ ಒಂದು ವಿಶಿಷ್ಟ ಮೆರುಗನ್ನು ನೀಡಿದ್ದಲ್ಲದೆ ಈ ಗ್ರಾಮದ ಇತಿಹಾಸಕ್ಕೂ ಅಮೋಘವಾದ ಕೊಡುಗೆಯನ್ನು ನೀಡಿದ್ದಾರೆ. ದಕ್ಷಿಣ ಭಾರತದಲ್ಲಿ ಮಿಂಚಿ ಮರೆಯಾದ ಹೊಯ್ಸಳರು ಮುನ್ನೂರ ಅರವತ್ತು ವರ್ಷಗಳ ಅವಧಿಯಲ್ಲಿನ ಆಳ್ವಿಕೆಯಲ್ಲಿ ಈ ಗ್ರಾಮದಲ್ಲಿ ಶ್ರೀರಂಗನಾಥಸ್ವಾಮಿ ದೇವಾಲಯವನ್ನು ನಿರ್ಮಿಸಿದ್ದಾರೆ. ಈ ದೇವಾಲಯವು ವಿಷ್ಣುವರ್ಧನನು ಶ್ರೀ ವೈಷ್ಣವ ಮತಕ್ಕೆ ಮತಾಂತರ ಆದ ತರುವಾಯ ಕಟ್ಟಿಸಿರುವ ದೇವಾಲಯವಾಗಿದೆ. ಈ ದೇವಾಲಯದ ಆಧಾರದ ಮೇಲೆ ಈ ಗ್ರಾಮವು ಹೊಯ್ಸಳರ ಕಾಲದಲ್ಲಿ ಅಸ್ತಿತ್ವದಲ್ಲಿತ್ತು ಎಂದು ಹೇಳಬಹುದಾಗಿದೆ.

**ಮೈಸೂರಿನ ಒಡೆಯರು:** ದಕ್ಷಿಣ ಭಾರತದಲ್ಲಿನ ಹಿಂದೂ ಅರಸು ಮನೆತನಗಳೆಲ್ಲ ಮಹಮ್ಮದೀಯ ದೊರೆಗಳ ಸತತವಾದ ದಾಳಿಗೆ ತುತ್ತಾಗಿ ಹೆಸರಿಲ್ಲದಂತಹ ಸಂದಿಗ್ಧ ಪರಿಸ್ಥಿತಿ ನಿರ್ಮಾಣವಾಗಿತ್ತು. ಅಂತಹ ಸಂದರ್ಭದಲ್ಲಿ ವಿಜಯನಗರದ ಉತ್ತರಾಧಿಕಾರಿಯಾಗಿ ಮೈಸೂರಿನ ಒಡೆಯರು ರಾಜಕೀಯ ರಂಗ ಪ್ರವೇಶಿಸಿದರು. ಯಾದವ ಕುಲಕ್ಕೆ ಸೇರಿದ ಕೃಷ್ಣ-ವಿಜಯ ಎಂಬ ಉತ್ತರದೇಶದ ಸಹೋದರರು ಈ ವಂಶದ ಮೂಲ ಪುರುಷರು. ಅನಂತರ ಈ ವಂಶದ ದೊಡ್ಡ ಹೆಸರು ರಾಜ ಒಡೆಯರು. ಇವರ ಕಾಲದಿಂದ ಒಡೆಯರ ವಂಶದ ಆಳ್ವಿಕೆಯ ಹೊಸ ಶಕೆ ಆರಂಭವಾಯಿತು. ಇವರ ಅನಂತರ ಚಾಮರಾಜ ಒಡೆಯರು, ಕಂಠೀರವ ನರಸರಾಜ ಒಡೆಯರು. ಅನಂತರ ಚಿಕ್ಕದೇವರಾಜ ಒಡೆಯರು ಆಳ್ವಿಕೆ ನಡೆಸಿದರು.

ದಿವಾನರ ಆಳ್ವಿಕೆಯ ಕಾಲದಲ್ಲಿ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಗಮನಾರ್ಹವಾದ ಪ್ರಗತಿ ಕಂಡಿತು. ಆ ಸಂದರ್ಭದಲ್ಲಿ ಈ ಗ್ರಾಮ ಪ್ರಗತಿಯತ್ತ ಹೆಜ್ಜೆ ಹಾಕಿತು. ಈ ಗ್ರಾಮಕ್ಕೆ ಸಮೀಪದಲ್ಲಿರುವ ಹೇಮಾವತಿಗೆ ಸೇತುವೆಯನ್ನು ಕಟ್ಟಲಾಗಿ ಹೊಳೆಯಾಚೆಗೆ ಹೋಗಲು ಬರಲು ಸಂಪರ್ಕ ಸೇತುವಾಯಾಯಿತು. ದನಕರುಗಳಿಗೆ ನೀರನ್ನು ಕುಡಿಸಲು ಅನುಕೂಲವಾಗುವಂತೆ ಕೆರೆಯನ್ನು ನಿರ್ಮಿಸಿದರು. ಹೀಗೆ ಪ್ರಗತಿಪರ ಕಾರ್ಯಗಳನ್ನು ಕೈಗೊಂಡರು.

ಸ್ವಾತಂತ್ರ್ಯ ಹೋರಾಟದಲ್ಲಿ ಈ ಗ್ರಾಮದ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಗೊರೂರು ರಾಮಸ್ವಾಮಿ ಅಯ್ಯಂಗಾರರ ಪ್ರಭಾವದಿಂದ ಅವರ ಜೊತೆ ಸೇರಿದ ಇಲ್ಲಿನ ಗ್ರಾಮಸ್ಥರು ಉಪವಾಸ ಸತ್ಯಾಗ್ರಹಗಳನ್ನು ಕೈಗೊಂಡರು. ಈ ಗ್ರಾಮದ ಮೇಲೆ ೧೯೪೨ರಲ್ಲಿ ನಡೆದ ಅರಣ್ಯ ಸತ್ಯಾಗ್ರಹ ತೀವ್ರತರವಾದ ಪರಿಣಾಮ ಬೀರಿತು. ಈ ಗ್ರಾಮದ ಸಾಕಷ್ಟು ಮುಖಂಡರುಗಳು ಗೊರೂರು ರಾಮಸ್ವಾಮಿ ಅಯ್ಯಂಗಾರ ಜತೆ ಜೈಲುವಾಸವನ್ನು ಅನುಭವಿಸಿದ್ದಾರೆ. ಈ ಗ್ರಾಮ ಜವರೇಗೌಡ, ರಾಜೇಗೌಡ ಮೊದಲಾದವರು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದವರು.

ಒಟ್ಟಾರೆ ಇತಿಹಾಸ ಪೂರ್ವ ಕಾಲದಲ್ಲಿ ಒಂದು ಸಾಮಾನ್ಯ ಊರಾಗಿದ್ದ ಈ ಗ್ರಾಮವು ಹೊಯ್ಸಳ ದೊರೆ ವಿಷ್ಣುವರ್ಧನನು ಕಟ್ಟಿಸಿದ ಶ್ರೀರಂಗನಾಥ ಸ್ವಾಮಿ ದೇವಾಲಯವು ಸಾಕಷ್ಟು ಜನರಿಗೆ ಮೂಲದೇವಾರಾಗಿದೆ. ಅನೇಕ ಏಳುಬೀಳುಗಳ ನಡುವೆಯು ಈ ಗ್ರಾಮವು ತನ್ನ ಪ್ರಭಾವವನ್ನು ಬೀರತೊಡಗಿದೆ.

# ಅಧ್ಯಾಯ– ೩

# ಸಾಮಾಜಿಕ ವ್ಯವಸ್ಥೆ

ಮನುಷ್ಯ ತನ್ನ ಕಾಡುವಾಸ ಸ್ಥಿತಿಯನ್ನು ಕಳೆದುಕೊಂಡು ಒಂದು ಕಡೆ ನೆಲೆ ನಿಲ್ಲಲು ಆರಂಭಿಸಿದಾಗಿನಿಂದ ಸಮಾಜ ರೂಪುಗೊಳ್ಳತೊಡಗಿತು ಎನ್ನಬಹುದು. ಸಾಮೂಹಿಕ ವಾಸ, ಬದುಕು ವ್ಯವಸಾಯ ಇತ್ಯಾದಿಗಳು ಪ್ರಾರಂಭದಲ್ಲಿ ಚಾಲ್ತಿಗೆ ಬಂದಿದ್ದು ಮಾನವ ಹೊಸ ಸಂಶೋಧನೆಗಳಿಗೆ ಇಳಿದು ಹೆಚ್ಚು ನಾಗರಿಕನಾದಂತೆ ಸಮಾಜವು ಸಹ ವಿಕಸನಗೊಂಡು ಸಂಕೀರ್ಣವಾಗುತ್ತಾ ಹೋಯಿತು. ಈ ನಾಗರಿಕತೆಯ ಬೆಳವಣಿಗೆಯ ನಾಲ್ಕು ಪ್ರಮುಖ ಆವಿಷ್ಕಾರಗಳು ಮತ್ತು ಆಧಾರ ಸ್ಥಂಭಗಳೆಂದರೆ ಬೆಂಕಿ, ಚಕ್ರ, ಹಣ ಮತ್ತು ಕಾನೂನುಗಳು.

ಸಮಾಜವನ್ನು “ಸಾಮಾಜಿಕ ಸಂಬಂಧಗಳ ಬಲೆ” ಎಂದು ಕರೆಯುತ್ತಾರೆ. ಸಮಾನ ಪ್ರಭಾವದ ಸಾಂಘಿಕ ವ್ಯವಸ್ಥೆಯನ್ನು ಒಟ್ಟಾರೆಯಾಗಿ ನಾವು “ಸಮಾಜ” ಎಂದು ಕರೆಯಬಹುದು. ಪರಸ್ಪರ ಕೊಡುಕೊಳ್ಳುವಿಕೆ, ಬೇಕು–ಬೇಡಗಳನ್ನು ಈ ವ್ಯವಸ್ಥೆ ಪೂರೈಸುತ್ತದೆ. ಈ ಸಮಾಜವು ಅತ್ಯಂತ ಕನಿಷ್ಠತಮ ಘಟಕವಾಗಿ ‘ಕುಟುಂಬ’ವನ್ನು ಹೊಂದಿದ್ದು ಅವು ಪರಸ್ಪರ ಅರಿವು ಸಹಕಾರ, ಹೊಂದಾಣಿಕೆಯ ಬಾಳ್ವೆಯೊಂದಿಗೆ ರಚಿತವಾಗಿರುತ್ತವೆ. ಜಾತಿ, ಲಿಂಗ, ವಯಸ್ಸು, ವರ್ಗ ಇತ್ಯಾದಿಗಳು ಕೂಡಿ ಆಳದಲ್ಲಿ ಸಮಾಜವು ಸಂಕೀರ್ಣವಾದುದೆನಿಸಿದೆ ‘ಮನುಷ್ಯ ಸಂಘಜೀವಿ’ಯಾದುದರಿಂದ ಈ ಭೇದಗಳು ಗೌಣವಾಗಿ, ಸಾದೃಶ್ಯಗಳು ಪ್ರಾಮುಖ್ಯವಾಗಿ ಹೊಂದಾಣಿಕೆ ಬದುಕು ಪ್ರಮುಖವಾದುದೆನಿಸುತ್ತದೆ. ಈ ದೃಷ್ಟಿಯಿಂದಲೇ ಪ್ರಖ್ಯಾತ ಮಾನವ ಸಂಸ್ಕೃತಿ ತಜ್ಞ ಅರಿಸ್ಟಾಟಲ್ “ಸಮಾಜದಲ್ಲಿ ಜೀವಿಸುವುದೇ ಮಾನವನ ನೈಸರ್ಗಿಕ ಗುಣ” ಎಂದಿದ್ದಾನೆ. ವಿಶಾಲ ವ್ಯಾಪ್ತಿಯ ಸಮಾಜದಲ್ಲಿ ನಿರ್ದಿಷ್ಟ ಪ್ರದೇಶವೊಂದರ ಸಾಮಾಜಿಕ ಅಧ್ಯಯನವನ್ನು ಸೂಕ್ಷ್ಮವಾಗಿ ನೋಡಿದರೆ ಅದರಿಂದ ದೊರಕುವ ಪ್ರತಿಫಲಿತಗಳು ಪೂರ್ಣ ಸಮಾಜವೊಂದರ ಪ್ರತಿನಿಧಿಯಾಗಿ ನಿಲ್ಲುತ್ತದೆ. ಈ ಕಾರಣದಿಂದ ಕಬ್ಬತ್ತಿ ಗ್ರಾಮವನ್ನು ಸಾಮಾಜಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕಬ್ಬತ್ತಿ ಗ್ರಾಮದ ಸಾಮಾಜಿಕ ಅಧ್ಯಯನಕ್ಕೆ ಹಲವಾರು ಅಂಶಗಳು ಪೂರಕವಾಗುತ್ತವೆ. ಇಲ್ಲಿ ದೊರೆಯುವ ಚಾರಿತ್ರಿಕ ಆಧಾರಗಳು, ಜಾತಿಪದ್ಧತಿ, ಜನಜೀವನ, ಆಚಾರ–ವಿಚಾರ, ಊಟೋಪಚಾರ, ವಸ್ತ್ರ ವೈವಿಧ್ಯ, ಹಬ್ಬಹರಿದಿನಗಳು, ಸಂಪ್ರದಾಯ ಆಚರಣೆ, ನಂಬಿಕೆ, ವೃತ್ತಿಗಳು, ಆರ್ಥಿಕ ವಿಚಾರಗಳು, ಜಾನಪದ, ಭಾಷಿಕ ವಿಚಾರಗಳು ಇತ್ಯಾದಿಗಳು ಇವುಗಳಲ್ಲದೆ ಸಮಾಜ ನಿರಂತರ ಪರಿವರ್ತನ ಶೀಲವಾದದ್ದು. ನಿಧಾನಗತಿಯಲ್ಲಿ ಬದಲಾವಣೆಯಾಗುತ್ತಿರುವುದು ಅದರ ಮುಖ್ಯ

ಗುಣವಾಗಿದೆ. ಈ ಪರಿವರ್ತನೆಗೆ ವೈಜ್ಞಾನಿಕ ಬೆಳವಣಿಗೆ, ಶಿಕ್ಷಣ, ಮಾಧ್ಯಮಗಳು, ಸಾರಿಗೆ-ಸಂಪರ್ಕ, ವೈಚಾರಿಕತೆ, ಸಾಮಾಜಿಕ ಶಾಸನಗಳು ಇತ್ಯಾದಿಗಳು ಪ್ರಮುಖ ಕಾರಣಗಳಾಗಿವೆ.

ಪ್ರಸ್ತುತ ಕಬ್ಬತ್ತಿ ಗ್ರಾಮವು ಹಾಸನ ತಾಲ್ಲೂಕಿನ ಒಂದು ಗ್ರಾಮವಾಗಿದೆ. ಪ್ರಸಿದ್ಧ ಪುಣ್ಯಕ್ಷೇತ್ರವಾಗಿರುವ ಇಲ್ಲಿಗೆ ದಿನಂಪ್ರತಿ ಭಕ್ತರು, ಶ್ರೀರಂಗನಾಥ ಸ್ವಾಮಿಯ ಒಕ್ಕಲಿನವರು ಭೇಟಿ ನೀಡುತ್ತಾರೆ. ಎಲ್ಲಾ ರೀತಿಯ ಜಾತಿ-ಜನಾಂಗದಿಂದ ಕೂಡಿದ ಜನತೆ ಇದ್ದು ವೈವಿಧ್ಯಮಯ ವೃತ್ತಿ-ಕಸುಬುಗಳನ್ನಾಧರಿಸಿ ಬದುಕು ನಡೆಸುತ್ತಿದ್ದಾರೆ. ಬೆಟ್ಟದ ಮೇಲೆ ಸುಂದರ ವಾತಾವರಣವಿದ್ದು, ಗೊರೂರು ಹೇಮಾವತಿ ಅಣೆಕಟ್ಟನ್ನು ವೀಕ್ಷಿಸುವುದರಿಂದ ಅಣೆಕಟ್ಟೆಯ ವಿಸ್ತೀರ್ಣ, ತುಂಬಿರುವಂತಹ ನೀರು ಮೊದಲಾದವನ್ನ ಗಮನಿಸಬಹುದಾಗಿದೆ. ಹಾಗೂ ಬೆಟ್ಟದ ದೇವಾಲಯದ ದರ್ಶನ ಪಡೆಯಬಹುದಾಗಿದೆ.

ಕಬ್ಬತ್ತಿ ಗ್ರಾಮದ ಸಾಮಾಜಿಕ ಜೀವನವನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಕಂಡಂತೆ ವಿಭಾಗಿಸಿಕೊಳ್ಳಬಹುದಾಗಿದೆ.

೧. ಕೌಟುಂಬಿಕ ವ್ಯವಸ್ಥೆ
೨. ಉಡುಗೆ-ತೊಡುಗೆ
೩. ಆರ್ಥಿಕ ವ್ಯವಸ್ಥೆ
೪. ಆಡಳಿತ ವ್ಯವಸ್ಥೆ
೫. ಜಾತಿ ವ್ಯವಸ್ಥೆ
೬. ರಕ್ತ ಬಾಂಧವ್ಯ
೭. ವಿವಾಹ ಬಾಂಧವ್ಯ
೮. ಆಸ್ತಿ ಹಂಚಿಕೆ
೯. ಊಟೋಪಚಾರ

**೧. ಕುಟುಂಬ ವ್ಯವಸ್ಥೆ:**

ಸಮಾಜದ ಕನಿಷ್ಟತಮ ಘಟಕವೇ ಕುಟುಂಬ ಸಮಾಜದಲ್ಲಿನ ಸದಸ್ಯರಿಗೆ ಭೌತಿಕ, ದೈಹಿಕ ಮತ್ತು ನೈತಿಕ ಆಧಾರ ಒದಗಿಸುವ ಸಂಸ್ಥೆಯಾಗಿದೆ ಇದು. ತನ್ನ ಸದಸ್ಯರ ಸರ್ವತೋಮುಖ ಬೆಳವಣಿಗೆ ಕುಟುಂಬದ ಪ್ರಮುಖ ಕರ್ತವ್ಯವಾಗಿದೆ. ಸಾಮಾಜಿಕ ವಿಜ್ಞಾನಿಗಳಾದ ಮೈಕೈವರ್ ಮತ್ತು ಪೇಜ್‌ರವರು ಕುಟುಂಬ ಎಂದರೆ "ಕುಟುಂಬವು ಲೈಂಗಿಕ ಸಂಬಂಧದಿಂದ ಸ್ಪಷ್ಟಪಡಿಸಲ್ಪಟ್ಟ, ಸಾಕಷ್ಟು ಖಚಿತವಾದ, ಮಕ್ಕಳನ್ನು ಪಡೆಯಲು, ಪೋಷಿಸಲು ಅವಕಾಶ ಮಾಡಿಕೊಡುವಂತಹ ಒಂದು

ಸಾಮಾಜಿಕ ವ್ಯವಸ್ಥೆ" ಎಂದು ವ್ಯಾಖ್ಯಾನಿಸಿದ್ದಾರೆ. ಒಟ್ಟಿನಲ್ಲಿ ಕುಟುಂಬವು ಸಮಾಜದ ಮೂಲಭೂತ ಮತ್ತು ಶಕ್ತಿಶಾಲಿ ಘಟಕವಾಗಿದೆ.

ಕುಟುಂಬಗಳನ್ನು ಅವುಗಳ ಲಕ್ಷಣದ ಮೇಲೆ ಹಲವಾರು ವಿಧಗಳಾಗಿ ವರ್ಗೀಕರಿಸಿದ್ದಾರೆ. ಕುಟುಂಬದ ಜವಾಬ್ದಾರಿಯು ತಂದೆ ಅಥವಾ ಗಂಡಸರಿಂದ ನಿರ್ವಹಿಸಲ್ಪಟ್ಟರೆ ಅದು 'ಪಿತೃಪ್ರಧಾನ' ಕುಟುಂಬವೆನಿಸುತ್ತದೆ. ಅಧಿಕಾರವು ತಾಯಿ ಅಥವಾ ಹೆಂಗಸರಲ್ಲಿ ಇದ್ದರೆ ಅದು 'ಮಾತೃಪ್ರಧಾನ' ಕುಟುಂಬವೆನಿಸಿಕೊಳ್ಳುತ್ತದೆ. ಕಬ್ಬತ್ತಿ ಗ್ರಾಮದಲ್ಲಿ ಎಲ್ಲಾ ಜಾತಿ-ಜನಾಂಗಗಳಲ್ಲಿಯೂ ಪ್ರಚಲಿತವಾಗಿರುವುದು ಪಿತೃ ಪ್ರಧಾನಕುಟುಂಬಗಳೇ ಆಗಿವೆ. ಹಾಗೆಯೇ ಕುಟುಂಬದ ಸದಸ್ಯರ ತಲೆಮಾರಿನ ಆಧಾರದ ಮೇಲೆ ಕುಟುಂಬಗಳನ್ನು ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬಗಳೆಂದು ವಿಂಗಡಿಸಿಕೊಳ್ಳುತ್ತಾರೆ. ವಿಭಕ್ತ ಕುಟುಂಬದಲ್ಲಿ ತಂದೆ, ತಾಯಿ ಮಕ್ಕಳು ಹೀಗೆ ಎರಡು ತಲೆಮಾರಿನವರು ಮಾತ್ರ ವಾಸಿಸುತ್ತಾರೆ. ಅವಿಭಕ್ತ ಕುಟುಂಬದಲ್ಲಿ ಕನಿಷ್ಠ ಮೂರು ತಲೆಮಾರಿನಿಂದ ಸುಮಾರು ಐದು ತಲೆಮಾರಿನವರು ಒಂದೇ ಮನೆಯಲ್ಲಿ ವಾಸಿಸುತ್ತಾರೆ. ಇದರ ಗಾತ್ರಕ್ಕೆ ಮಿತಿಯಿರುವುದಿಲ್ಲ. ಪ್ರಸ್ತುತ ಕಬ್ಬತ್ತಿ ಗ್ರಾಮದಲ್ಲಿ ಎಲ್ಲಾ ಜಾತಿ ಜನಾಂಗದವರನ್ನು ಸಂಪರ್ಕಿಸಿದಾಗ ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಬಗಳ ಸಂಖ್ಯೆಯೇ ಹೆಚ್ಚಾಗಿದೆ. ಒಕ್ಕಲಿಗ ಜನಾಂಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿಭಕ್ತ ಕುಟುಂಬ ವ್ಯವಸ್ಥೆ ಇದ್ದರೆ, ಹರಿಜನ ಇತರೆ ಜನಾಂಗದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ ಸ್ವಲ್ಪ ಪ್ರಮಾಣದಲ್ಲಿ ಇರುವುದನ್ನು ಕಾಣಬಹುದು.

**೨. ಆರ್ಥಿಕ ವ್ಯವಸ್ಥೆ:**

ಕಬ್ಬತ್ತಿ ಗ್ರಾಮದ ಜನರ ಆರ್ಥಿಕ ಸ್ಥಿತಿಗತಿಗಳನ್ನು ಗಮನಿಸಿದಾಗ 'ಏನೋ ಸ್ವಾಮಿ ಜೀವನ ಸಾಗಿಸುತ್ತಿದ್ದೇವೆ. ಆರಕ್ಕೇರಲಿಲ್ಲ- ಮೂರಕ್ಕಿಳಿಯಲಿಲ್ಲ" ಎನ್ನುವ ಜನರ ಈ ಮಾತನ್ನು ಗಮನಿಸಿದಾಗ ಅಲ್ಲಿನ ಆರ್ಥಿಕ ಚಟುವಟಿಕೆಗಳು, ಸ್ಥಿತಿಗತಿಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಅಣೆಕಟ್ಟಿನ ಕೆಲವೇ ಮೈಲಿಗಳಷ್ಟು ಹತ್ತಿರದಲ್ಲಿದ್ದರೂ ನೀರಾವರಿಯ ಸೌಲಭ್ಯವಿಲ್ಲ. ಕೆರೆಯನ್ನೇ ಅವಲಂಭಿಸಿ ನೀರಾವರಿ ಬೆಳೆಯನ್ನು ಬೆಳೆಯಬೇಕು. ಮಳೆ ಆಧಾರಿತ ಭೂಮಿಯೇ ಹೆಚ್ಚಾಗಿದ್ದು ಇದನ್ನೇ ಅವಲಂಭಿಸಿದ್ದಾರೆ ಹಾಗೂ ಸಾಕು ಪ್ರಾಣಿಗಳ ಮೇಲೆ ಆಧಾರಿತವಾಗಿದೆ. ಹೆಚ್ಚು ಕೃಷಿಯನ್ನು ಅವಲಂಭಿಸಿರುವವರು ಒಕ್ಕಲಿಗ ಜನಾಂಗವೇ ಆಗಿದ್ದಾರೆ. ವರ್ಷದಲ್ಲಿ ಬೀಳುವ ಅಲ್ಪ ಸ್ವಲ್ಪ ಮಳೆಯಿಂದ ರಾಗಿ, ಜೋಳ, ಅವರೆ, ತಗಣಿ, ಉರುಳಿ ಇತ್ಯಾದಿ ಧಾನ್ಯಗಳನ್ನು ಹಾಗೂ ಆಲೂಗೆಡ್ಡೆಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಕೆರೆಯ ಹಿಂದೆ ತರಿ ಜಮೀನುಳ್ಳವರು ಕೆರೆ ತುಂಬಿದಾಗ ಭತ್ತ

ಬೆಳೆಯುತ್ತಾರೆ. ಕೊಳವೆ ಬಾವಿಗಳನ್ನು ಹಾಕಿಸಿಕೊಂಡವರು ವರ್ಷಕ್ಕೆ ಎರಡು ಬೆಳೆಗಳು ಹಾಗೂ ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ.

ಸೀಮೆ ಹಸು, ಎಮ್ಮೆಗಳನ್ನು ಸಾಕಿಕೊಂಡವರು ಹೈನುಗಾರಿಕೆಯಿಂದ ಜೀವನ ನಡೆಸುತ್ತಾರೆ. ಹಾಗೆಯೇ ಕುರಿ, ಮೇಕೆಗಳನ್ನು ಸಾಕಿಕೊಂಡು ಸ್ವಲ್ಪ ಆರ್ಥಿಕ ಲಾಭ ಪಡೆಯುತ್ತಾರೆ. ವ್ಯವಸಾಯವನ್ನು ಅವಲಂಭಿಸಿರುವ ಒಕ್ಕಲಿಗ ಜನಾಂಗದವರೇ ಬೇರೆ ಕಸುಬುಗಳ ಬಗೆಗೆ ಕುಶಲತೆ ಇಲ್ಲದಿರುವುದರಿಂದ ಕೃಷಿಯನ್ನು ನೆಚ್ಚಿಕೊಂಡಿದ್ದಾರೆ. ಇಲ್ಲಿನ ಬ್ರಾಹ್ಮಣ ಜನಾಂಗದವರು ಮೂಲತಃ ದೇವಾಲಯವನ್ನು ಆಶ್ರಯಿಸಿ ಬದುಕುತ್ತಿದ್ದಾರೆ. ಶ್ರೀರಂಗನಾಥಸ್ವಾಮಿ ದೇವಾಲಯ, ಲಕ್ಷ್ಮಿದೇವಿ ದೇವಸ್ಥಾನ ಮೊದಲಾದ ದೇವಾಲಯಗಳ ಅರ್ಚಕರಾಗಿ ಸೇವೆ ಸಲ್ಲಿಸುತ್ತಾ ಜೀವನ ಸಾಗಿಸುತ್ತಿದ್ದಾರೆ. ಆಧುನಿಕ ವಿದ್ಯಾಭ್ಯಾಸ ಪಡೆದ ನವ ಪೀಳಿಗೆ 'ದೊಡ್ಡ ದೊಡ್ಡ ಪಟ್ಟಣಗಳಿಗೆ ಉದ್ಯೋಗಕ್ಕಾಗಿ ವಲಸೆ ಹೋಗಿ ಅಲ್ಲಿಯೇ ನೆಲೆ ನಿಂತಿದೆ. ಹರಿಜನರು ಹೊಲಗದ್ದೆಗಳಲ್ಲಿ ಆಳುಗಳಾಗಿ ದುಡಿಯುವ ಶ್ರಮದಾಯಕ ಕಾರ್ಯಗಳಲ್ಲಿ ತೊಡಗಿ ಜೀವನ ನಡೆಸುತ್ತಿದ್ದವರು ಈಗ ಸ್ವತಃ ಭೂಮಿಯನ್ನು ಹೊಂದಿ ವ್ಯವಸಾಯದ ಕಾರ್ಯ ಮಾಡುತ್ತಿದ್ದಾರೆ. ಜೊತೆಗೆ ವಿದ್ಯಾಭ್ಯಾಸವನ್ನು ಪಡೆದು ವಿವಿಧ ಸರ್ಕಾರಿ, ಖಾಸಗಿ ಕಛೇರಿ– ಕಾರ್ಖಾನೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇತ್ತೀಚೆಗೆ ಇವರ ಆರ್ಥಿಕ ಸ್ಥಿತಿ ಉತ್ತಮವಾಗಿದೆ. ಆದರೆ ಸ್ವಂತ ಜಮೀನು ವ್ಯಾಪಾರ ಇತ್ಯಾದಿಗಳಿಲ್ಲದೆ ಕೂಲಿಯಿಂದ ಜೀವನ ಮಾಡುತ್ತಿರುವ ಹರಿಜನರ ಸ್ಥಿತಿ ನಿಜಕ್ಕೂ ಶೋಚನೀಯ–ವಾದುದಾಗಿದೆ. ವಿಶ್ವಕರ್ಮರು, ಕ್ಷೌರಿಕರು, ಮಡಿವಾಳರು ತಮ್ಮ ಪರಂಪರಾಗತ ವೃತ್ತಿಗಳನ್ನಾಧರಿಸಿ ಬದುಕು ನಡೆಸುತ್ತಿದ್ದಾರೆ. ಇಂದು ಎಲ್ಲಾ ಜನಾಂಗದವರು ಹೆಚ್ಚು ಶ್ರಮದಾಯಕವಾದ ಕಾರ್ಯಗಳಿಗೆ ಬದಲು ಸುಲಭವಾಗಿ ಹಣವನ್ನು ಸಂಪಾದಿಸುವ ವೃತ್ತಿಗಳನ್ನು ನಿರ್ವಹಿಸಲು ಆಸಕ್ತಿ ತೋರುತ್ತಿದ್ದಾರೆ. ಈ ಊರಿಗೆ ಒಳವಲಸೆಯು ತೀರ ಕಡಿಮೆ ಇದೆ. ಬೇರೆ ಜನಾಂಗದ ವಿದ್ಯಾವಂತ ವರ್ಗದ ಹೊರ ವಲಸೆ ನಡೆಯುತ್ತಿದೆ. ಇತ್ತೀಚೆಗೆ ಮಹಿಳೆಯರ ಸ್ವ–ಸಹಾಯ ಸಂಘಗಳು ಹೆಚ್ಚಾಗಿದ್ದು, ಅವುಗಳಂತೆ ಪುರುಷರ ಸ್ವ–ಸಹಾಯ ಸಂಘಗಳೂ ಕೂಡ ಇವೆ.

**೩. ಆಡಳಿತ ವ್ಯವಸ್ಥೆ**

ಕುಟುಂಬ, ಜಾತಿ, ಗ್ರಾಮ, ಪಟ್ಟಣ, ನಗರ ಮೊದಲಾದ ಹಂತಗಳಲ್ಲಿ ಒಂದು ಸುವ್ಯವಸ್ಥಿತವಾದ ಆಡಳಿತ ಇದ್ದರೆ ಅದು ಅಭಿವೃದ್ಧಿಯಲ್ಲಿ ಯಶಸ್ವಿಯಾಗುತ್ತದೆ, ಅದಿಲ್ಲದಿದ್ದರೆ ಸಮಾಜದ ಸರ್ವತೋಮುಖ ಬೆಳವಣಿಗೆ ಅಸಾಧ್ಯವೆನಿಸಿ ಅಭಿವೃದ್ಧಿಯಲ್ಲಿ ಹಿಂದೆ ಬೀಳುತ್ತದೆ. ಇದು ಎಲ್ಲರಿಗೂ ತಿಳಿದಿರುವ ವಿಚಾರವಾಗಿದೆ. ಕಬ್ಬತ್ತಿ ಗ್ರಾಮದಲ್ಲಿ ಮೂರು ಮಟ್ಟದಲ್ಲಿ ಆಡಳಿತ ವ್ಯವಸ್ಥೆಯನ್ನು ಪರಿಶೀಲಿಸಬಹುದಾಗಿದೆ.

೧) **ಕುಟುಂಬ ಮಟ್ಟದಲ್ಲಿ ಆಡಳಿತ ವ್ಯವಸ್ಥೆ:** ಬಹುಪಾಲು ವಿಭಕ್ತ ಕುಟುಂಬಗಳು ಇದ್ದು ಅವಿಭಕ್ತ ಕುಟುಂಬಗಳ ಸಂಖ್ಯೆ ತುಂಬಾ ಕಡಿಮೆ ಇವೆ. ಹಾಗೆಯೇ ಮಾತೃಪ್ರಧಾನ ಕುಟುಂಬಗಳಿಗಿಂತ ಪಿತೃಪ್ರಧಾನ ಕುಟುಂಬಗಳೇ ಹೆಚ್ಚು ಇವೆ. ಈ ಕಾರಣದಿಂದ ಕುಟುಂಬ ಮಟ್ಟದಲ್ಲಿ 'ಪುರುಷ ಪ್ರಧಾನ ಆಳ್ವಿಕೆ' ಸಹಜವಾಗಿವೆ. ಯಾವುದೇ ನಿರ್ಣಯ, ಆಚರಣೆ, ಬದಲಾವಣೆ, ವಿವಾಹ ಸಂಬಂಧ ಇತ್ಯಾದಿಗಳಲ್ಲಿ ಮನೆಯ ಯಜಮಾನನ ಮಾತೇ ಪ್ರಧಾನವಾಗಿದೆ. ಮಕ್ಕಳು ವಿದ್ಯಾವಂತರಾಗಿದ್ದಲ್ಲಿ ಹೊರ ಪಟ್ಟಣಗಳೊಂದಿಗೆ ಸಂಪರ್ಕವಿರಿಸಿಕೊಂಡಿರುವ ಕುಟುಂಬಗಳಲ್ಲಿ ಆ ವಿದ್ಯಾವಂತ ಗಂಡುಮಕ್ಕಳ ಮಾತೇ ಪ್ರಧಾನವಾಗಿದ್ದು, ಅವರ ನಿರ್ದೇಶನದಂತೆ ಮನೆಯ ಆಡಳಿತ ನಡೆಯುತ್ತದೆ. ಕೆಲವು ಮನೆಗಳಲ್ಲಿ ಗಂಡ–ಹೆಂಡತಿಯರ ಮಾತು ನಿರ್ಣಯಗಳು ನಡೆದರೆ, ಕೆಲವು ಕುಟುಂಬಗಳಲ್ಲಿ ಸ್ತ್ರೀಯರ ಮಾತೇ ಪ್ರಧಾನವಾಗಿ ಅವರಿಗೆ ಬಹುಮುಖ್ಯ ಪಾತ್ರ ದೊರೆತಿರುವುದನ್ನು ಕಾಣಬಹುದು.

೨) **ಜಾತಿ ಮಟ್ಟದಲ್ಲಿ ಆಡಳಿತ ವ್ಯವಸ್ಥೆ:** ಜಾತಿಮಟ್ಟದ ಆಡಳಿತ, ಪಂಚಾಯಿತಿ, ಕಾನೂನು ಕಟ್ಟಳೆಗಳಿಗೆ ಆಧುನಿಕ ಕಾನೂನು ವ್ಯವಸ್ಥೆ ಮಾನ್ಯತೆ ನೀಡದಿದ್ದರೂ ಗ್ರಾಮಮಟ್ಟದಲ್ಲಿ ಇವುಗಳ ಪಾತ್ರ ಪರಿಣಾಮಕಾರಿಯಾದುದಾಗಿದೆ. ಜಾತಿಯೊಳಗೆ ನಡೆಯುವ ಜಗಳ, ಮದುವೆ, ಹಬ್ಬಹರಿದಿನ, ಕುರಿತಾದ ಮನಸ್ತಾಪ, ಹೊಡೆದಾಟ–ಬಡಿದಾಟ, ಜಾತಿ ಬಿಟ್ಟವರನ್ನು ಜಾತಿಗೆ ಸೇರಿಸಿಕೊಳ್ಳುವುದು ಪಂಚಾಯಿತಿಗೆ ಬೆಲೆ ಕೊಡದವರನ್ನು ಜಾತಿ ಮತ್ತು ಗ್ರಾಮದಲ್ಲಿ ಬಹಿಷ್ಕರಿಸುವುದು ಆಸ್ತಿ ವಿಭಾಗ ಇನ್ನಿತರ ಸಂದರ್ಭಗಳಲ್ಲಿ ಜಾತಿ ಆಡಳಿತಗಳು ಮಹತ್ವಪೂರ್ಣ ಪಾತ್ರ ವಹಿಸುತ್ತದೆ. ಕಬ್ಬತ್ತಿ ಗ್ರಾಮದಲ್ಲಿಯೂ ಸಹ ಒಂದೊಂದು ಜಾತಿಯ ಒಳಜಗತ್ತೆ ಇದ್ದೂ ತನ್ನದೇ ಆದ ಆಡಳಿತ ನ್ಯಾಯ ನಿರ್ಣಯ ವ್ಯವಸ್ಥೆ ಹೊಂದಿದೆ. ಜಾತಿ ವ್ಯವಸ್ಥೆ ಒಂದು ಸಮಸ್ಯೆ ಪೆಡಂಭೂತ ಎನಿಸಿದರೂ ಸಾಮಾನ್ಯ ಮನುಷ್ಯ ಒಂದು ರೀತಿಯಲ್ಲಿ ಬಯಸುತ್ತಾನೆ, ಇಷ್ಟಪಡುತ್ತಾನೆ ಎನಿಸುತ್ತದೆ. ಜಾತಿಯ ಮುಖಾಂತರ ಬೇರೆ ಜಾತಿಗಳ ನಡುವಿನ ಸ್ಪರ್ಧೆಯಲ್ಲಿ ತನ್ನವರನ್ನು ಗುರುತಿಸಿಕೊಳ್ಳಲು ತಾನು ಸುರಕ್ಷವಾಗಿದ್ದೇನೆ ಎಂಬ ಭಾವ ಬೆಳೆಯಲು ಇದು ಸಹಕಾರಿ ಎಂದು ಆತ ಭಾವಿಸಿಕೊಂಡು ಈ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗಲು ಅಪರೋಕ್ಷವಾಗಿ ಒಪ್ಪಿರುತ್ತಾನೆ. ಒಕ್ಕಲಿಗ, ಹರಿಜನ, ನಯನಜಕ್ಷತ್ರಿಯ, ಮಡಿವಾಳ ಮುಂತಾದ ಜಾತಿಗಳಲ್ಲಿ ಆಡಳಿತ ವ್ಯವಸ್ಥೆ ಇದೆ. ಜಾತಿ ಆಡಳಿತ ವ್ಯವಸ್ಥೆಯ ಮುಖ್ಯಸ್ಥ ಆ ಜಾತಿಯ ಹಿರಿಯ, ಮುಖಂಡ, ಬುದ್ಧಿವಂತ ವ್ಯಕ್ತಿಯು ಇರುತ್ತಾನೆ. ಇವನ ಕೈಕೆಳಗೆ ಹಬ್ಬ ಹರಿದಿನ, ಉತ್ಸವ, ಮದುವೆಮುಂಜಿ ಇತ್ಯಾದಿಗಳಲ್ಲದೆ ಜಗಳ, ಮನಸ್ತಾಪ, ಹೊಡೆದಾಟ, ಅಕ್ರಮ ಸಂಬಂಧ, ಜಾತಿ ಬಿಡುವುದು ಇತ್ಯಾದಿ ಸಮಸ್ಯೆಗಳು ಈ ಜಾತಿಗಳ ಸಭೆಗಳಲ್ಲಿ

ನಿರ್ಣಯವಾಗುತ್ತವೆ. ಸಭೆಯ ತೀರ್ಮಾನ ನಿರ್ಣಯ ಮೀರಿದವರಿಗೆ ಕಠಿಣವಾದ ದಂಡ ಮತ್ತು ಶಿಕ್ಷೆಗಳನ್ನು ಸಹ ವಿಧಿಸುತ್ತಾರೆ. ಆದರೆ ಇಂದು ನಾಗರಿಕತೆ ಬೆಳೆದಂತೆ ಈ ವ್ಯವಸ್ಥೆ ಅವಿಶ್ವಾಸ ಮೂಡಿಸಿಕೊಂಡ ವ್ಯಕ್ತಿ ಕೋರ್ಟು ಕಛೇರಿಗಳಿಗೆ ಶರಣಾಗುತ್ತಿದ್ದಾನೆ.

**ಗ್ರಾಮಮಟ್ಟದಲ್ಲಿ ಆಡಳಿತ ವ್ಯವಸ್ಥೆ:**

ಈಗ ಗ್ರಾಮ ಪಂಚಾಯಿತಿ ಅಸ್ತಿತ್ವಕ್ಕೆ ಬಂದಿದ್ದು, ಈ ಜನ ಚುನಾಯಿತ ಸದಸ್ಯರನ್ನು ಒಳಗೊಂಡಿದ್ದು ಅದರಲ್ಲಿ ಒಬ್ಬರು ಅಧ್ಯಕ್ಷರು ಮತ್ತೊಬ್ಬರು ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಗ್ರಾಮದ ಹಾಗೂ ಇದಕ್ಕೆ ಸೇರಿದ ಸುತ್ತಲಿನ ಗ್ರಾಮಗಳ ಆಗುಹೋಗುಗಳು ಇವರಿಗೆ ಸಂಬಂಧಿಸಿದುದಾಗಿದ್ದು ಅದರ ಅಭಿವೃದ್ಧಿಗೆ ಶ್ರಮಿಸುವ ಜವಾಬ್ದಾರಿ ಇವರದ್ದಾಗಿದೆ. ಭೂಕಂದಾಯ, ಮನೆಕಂದಾಯ, ನೀರಿನ ಕಂದಾಯ ಇತ್ಯಾದಿ ಮೂಲಗಳಿಂದ ಆದಾಯ ಪಡೆದು ರಸ್ತೆ ನಿರ್ಮಾಣ, ಚರಂಡಿ ಸ್ವಚ್ಛತೆ, ಬಿದಿದೀಪ ಸೌಲಭ್ಯ, ಕುಡಿಯುವ ನೀರಿನ ವ್ಯವಸ್ಥೆ ಇತ್ಯಾದಿ ಅನುಕೂಲಗಳನ್ನು ಕಲ್ಪಿಸಿಕೊಡಲಾಗುತ್ತಿದೆ.

**೪. ಜಾತಿ ವ್ಯವಸ್ಥೆ;**

ಭಾರತೀಯ ಸಮಾಜದ ವಿಶಿಷ್ಟಗುಣ ಮತ್ತು ಮೂಲಭೂತ ಸಮಸ್ಯೆಯೇ ಈ ಜಾತಿವ್ಯವಸ್ಥೆ. ಇದು ತುಂಬಾ ಸಂಕೀರ್ಣ ವ್ಯವಸ್ಥೆಯಾಗಿದ್ದು ಇದು ಹೇಗೆ ಹುಟ್ಟಿಕೊಂಡಿತು ಎಂಬುದರ ಬಗ್ಗೆ ಸಾಕಷ್ಟು ಚರ್ಚೆ-ಸಂವಾದಗಳೂ ನಡೆದಿದ್ದರೂ ಅಂತಿಮ ನಿರ್ಧಾರಕ್ಕೆ ಬರಲಾಗಿಲ್ಲ. ಹಿಂದೂ ಪುರಾಣಗಳ ಪ್ರಕಾರ ಜಾತಿಗಳನ್ನು ಸೃಷ್ಟಿಕರ್ತನಾದ ಬ್ರಹ್ಮನು ಮಾಡಿದ್ದಾನೆ. ಈತನ ದೇಹದ ನಾಲ್ಕು ಭಾಗಗಳಿಂದ ನಾಲ್ಕು ವರ್ಣದವರು ಜನ್ಮ ತಾಳಿದರು. ಬಾಯಿಯಿಂದ ಬ್ರಾಹ್ಮಣರು, ಬುಜದಿಂದ ಕ್ಷತ್ರಿಯರು, ತೊಡೆಯಿಂದ ವೈಶ್ಯರು ಮತ್ತು ಪಾದದಿಂದ ಶೂದ್ರರು. ಈ ನಾಲ್ಕು ವರ್ಣಗಳ ಜನರಿಗೆ ಪ್ರತ್ಯೇಕವಾದ ವೃತ್ತಿದೇವರುಗಳು ಮತ್ತು ಮಣ್ಣನ್ನು ನಿಗಧಿಪಡಿಸಲಾಗಿದೆ ಎಂಬ ನಂಬಿಕೆ ಇದೆ. ಋಗ್ವೇದದ ಕಾಲಕ್ಕಾಗಲೇ ಈ ಜಾತಿಯ ಬಗೆಗಿನ ಪ್ರಸ್ತಾಪವಿರುವುದನ್ನು ಕಾಣಬಹುದು. ಈ ವೇದದ ಕಾಲಕ್ಕಾಗಲೇ ಸಮಾಜದಲ್ಲಿ ಜಾತಿ ಸ್ಥಿರವಾಗಿ ನಿಂತ ಸೂಚನೆಗಳು ಕಾಣಸಿಗುತ್ತವೆ. ಇವುಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಣಗಳಿಗೆ ಸಮಾಜದಲ್ಲಿ ದೊಡ್ಡ ದೊಡ್ಡ ಹುದ್ದೆ ಗೌರವ ಮತ್ತು ಶ್ರೀಮಂತಿಕೆ ಲಭಿಸಿತ್ತು. ಶೂದ್ರ ವರ್ಗ ಮೊದಲಿನ ಎಲ್ಲಾ ವರ್ಗಗಳ ಸೇವೆ ಮಾಡಿಕೊಂಡು ಬಹಳ ಕೀಳಾಗಿ ಬದುಕಬೇಕಾಗಿತ್ತು. ವರ್ಣ ವ್ಯವಸ್ಥೆ ಬಹಳ ಕಟ್ಟುನಿಟ್ಟಿನದಾಗಿದ್ದು, ವರ್ಣ ಸಂಕರಕ್ಕೆ ಆಸ್ಪದವಿರಲಿಲ್ಲ. ಇದ್ದಕ್ಕಾಗಿ ಬಹುದೊಡ್ಡ ಶಿಕ್ಷೆ ನೀಡಲ್ಪಡುತ್ತಿತ್ತು. ಮುಂದೆ ವೃತ್ತಿಗಳ

ಮೇಲೆ ಜಾತಿಗಳು ನಿಂತು ಪ್ರಬಲವಾಗಿ ಬೇರೂರಿ ಮೇಲ್ವರ್ಗದಿಂದ ಕೆಳವರ್ಗದ ಶೂದ್ರರು ನಿರಂತರ ಶೋಷಣೆಗೆ ಒಳಗಾಗುವಂತಾಯಿತು.

ಜಾತಿಯು ಭಾರತೀಯ ಸಮಾಜವನ್ನು ಮಾನವನ ಹುಟ್ಟಿನ ಆಧಾರದ ಮೇಲೆ ಒಡೆದಿದೆ. ಇಡೀ ಸಮಾಜಕ್ಕೆ ಒಂದು ಕೇಂದ್ರ ಉದ್ದೇಶ ಇಲ್ಲದಂತೆ ಮಾಡಿದೆ. ಬ್ರಾಹ್ಮಣ್ಯದ ಶ್ರೇಷ್ಠತೆಯನ್ನು ನಿರ್ವಿವಾದವಾಗಿ ಸಾರುವ ಜಾತಿಪದ್ಧತಿಯು ಕೆಳಜಾತಿಯ ಜನರನ್ನು ನಿಕೃಷ್ಟವಾಗಿ ಕಾಣುವಂತೆ ಪ್ರಚೋದಿಸಿವೆ. ಇಂತಹ ಅನಿಷ್ಟ ಪದ್ಧತಿಯ ಬಗೆಗೆ ಭಾರತದಲ್ಲಿ ಮೊದಲು ಧ್ವನಿ ಎತ್ತಿದವನೆಂದರೆ ಗೌತಮ ಬುದ್ಧ. ಆತನ ಜಾತಿ ವಿರೋಧಿ ಧೋರಣೆಯಿಂದ ಜಾತಿ ಪದ್ಧತಿಯು ಒಮ್ಮೆ ಹಿಮ್ಮೆಟ್ಟಿದಂತಾದರೂ ಮುಂದೆ ಅದು ಪ್ರಬಲವಾಗುತ್ತಾ ಹೋಯಿತು. ಅನಂತರ ಬಸವಣ್ಣ, ಚೈತನ್ಯ, ಜ್ಞಾನೇಶ್ವರ, ಕಬೀರ–ದಾಸ ಮೊದಲಾದವರು ಜಾತಿ ಪದ್ಧತಿಯನ್ನು ಹೊಡೆದೋಡಿಸಲು ಹೋರಾಡಿದ್ದಾರೆ. ಆದರೆ ಬಹುತೇಕವಾಗಿ ಇವರ ಪ್ರಯತ್ನಗಳೆಲ್ಲಾ ವಿಫಲವಾಗಿದೆ. ಇಂಗ್ಲಿಷ್ ಶಿಕ್ಷಣ ಪಡೆದ ರಾಜರಾಮ್ ಮೋಹನರಾಯ್, ದಯಾನಂದ ಸರಸ್ವತಿ, ರಾಮಕೃಷ್ಣ ಪರಮಹಂಸ, ವಿವೇಕಾನಂದ ಮೊದಲಾದ ಆಧುನಿಕರು ಜಾತಿ ಪದ್ಧತಿಯು ನಾಶವಾಗುವ ಕನಸು ಕಂಡಿದ್ದರು. ಪ್ರಜಾಪ್ರಭುತ್ವವು ಒಂದು ಮಹಾನ್ ಸಂಘಟನೆಯಾಗಿ ಬೆಳೆದುನಿಂತು ಜಾತಿ ಪದ್ಧತಿಯ ಬೇರುಗಳನ್ನು ಸಡಿಲಗೊಳಿಸುತ್ತದೆ ಎಂದೂ ಹಲವರು ಭಾವಿಸಿದ್ದುಂಟು. ಆದರೆ ಇಂತಹ ಊಹೆಗಳೆಲ್ಲ ಸುಳ್ಳಾಗಿ ಜಾತಿ ಪದ್ಧತಿಯು ಇಂದಿಗೂ ಪೆಡಂಭೂತವಾಗಿ ಉಳಿದುಕೊಂಡು ಬಂದಿದೆ.

ಈ ಅಂಶಗಳಿಂದ ಕಬ್ಬತ್ತಿಯ ಜಾತಿವ್ಯವಸ್ಥೆಯನ್ನು ಪರಿಶೀಲಿಸಿದಾಗ ಇಲ್ಲಿ ಬ್ರಾಹ್ಮಣರು ಪುರೋಹಿತ ಕಾರ್ಯವನ್ನು ಮಾಡುತ್ತಿದ್ದರೆ, ಒಕ್ಕಲಿಗರು ಕೃಷಿ ಚಟುವಟಿಕೆ ಮಾಡುತ್ತಿದ್ದು ಪ್ರಬಲವಾದ ಜಾತಿಯಾಗಿ ಬೆಳೆದು ನಿಂತಿದೆ. ಉಳಿದಂತೆ ಹರಿಜನ, ಕ್ಷೌರಿಕ, ಮಡಿವಾಳರು ಮೊದಲಾದ ಜಾತಿಗಳು ಕಡಿಮೆ ಸಂಖ್ಯೆಯಲ್ಲಿವೆ. ಈ ಗ್ರಾಮದ ಶ್ರೀರಂಗನಾಥ ಸ್ವಾಮಿ ದೇವರ ಒಕ್ಕಲುಗಳು ಇರುವಂತೆ ಬೇರೆ ದೇವರುಗಳ ಒಕ್ಕಲುಗಳು ಸಹ ಈ ಗ್ರಾಮದಲ್ಲಿ ವಾಸವಿದ್ದಾರೆ. ಪ್ರತಿಯೊಂದು ಜಾತಿ ಜನಾಂಗವೂ ತಮ್ಮದು ಶ್ರೇಷ್ಠ ಎಂಬ ಭಾವನೆಗಳನ್ನೊಂದಿವೆ. ಹರಿಜನ, ಕ್ಷೌರಿಕ, ಮಡಿವಾಳ ಮೊದಲಾದ ಹಿಂದುಳಿದ ಜನಾಂಗಗಳಿಗೆ ಸರ್ಕಾರ ಅನೇಕ ಆರ್ಥಿಕ, ಸಾಮಾಜಿಕ ಸವಲತ್ತುಗಳನ್ನು ಕಲ್ಪಿಸಿಕೊಡುತ್ತಿದ್ದು ಅವುಗಳನ್ನು ಬಳಸಿಕೊಂಡು ಅಭಿವೃದ್ಧಿ ಹೊಂದಿ ಮೇಲ್ವರ್ಗದೊಂದಿಗೆ ಸಾಮಾಜಿಕ ಸ್ಥಾನಮಾನ ಮತ್ತು ಧಾರ್ಮಿಕತೆಯಲ್ಲಿ ಸರಿದೂಗಲು ಹವಣಿಸುತ್ತಿದ್ದಾರೆ. ಜಾತಿ, ಜನಾಂಗಳು ಹಳೆಯ ಕಟ್ಟುಪಾಡುಗಳನ್ನು ಇಟ್ಟುಕೊಂಡು ಪರಸ್ಪರ ಮುಟ್ಟದಂತೆ ಹೆಣ್ಣು ಕೊಟ್ಟ ತರದಂತೆ ನಡೆದುಕೊಂಡು ಹೋಗುತ್ತಿವೆ. ಆದರೆ ಆಧುನಿಕ ಗಾಳಿ ಪ್ರಬಲವಾಗಿ ಬೀಸಿದಂತೆ ಅಲ್ಲೊಂದು ಇಲ್ಲೊಂದು ಎನ್ನುವಂತೆ

ಅಂತರ್ಜಾತಿ ವಿವಾಹ ನಡೆಯುತ್ತಿದ್ದು ವಿದ್ಯಾಭ್ಯಾಸ ಪಡೆದುಕೊಂಡವರ ಸಂಖ್ಯೆ ಬೆಳೆದಂತೆ ಜಾತಿ-ಜಾತಿಗಳ ನಡುವೆ ಇರುವ ಅಂತರ ಕಡಿಮೆಯಾಗುತ್ತ ತೊಡಗಿದೆ.

**ಬ್ರಾಹ್ಮಣರು:** ಕಬ್ಬತ್ತಿ ಗ್ರಾಮದಲ್ಲಿ ಕೆಲವೇ ಕುಟುಂಬಗಳು ಮಾತ್ರ ಇವೆ. ಆ ಕೆಲವೇ ಕುಟುಂಬಗಳು ದೇವಸ್ಥಾನಗಳಲ್ಲಿ ಅರ್ಚಕರಾಗಿ ಅನಂತರ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಜೀವನ ನಿರ್ವಹಣೆಯ ಮಾರ್ಗವನ್ನು ಕಂಡುಕೊಂಡಿದ್ದಾರೆ. ಶ್ರಿರಂಗನಾಥಸ್ವಾಮಿ ದೇವಾಲಯ, ಲಕ್ಷ್ಮೀದೇವಿ ದೇವಾಲಯಗಳಲ್ಲಿ ಪೂಜಾ ಕೈಂಕರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಉತ್ತಮ ಶಿಕ್ಷಣವನ್ನು ಪಡೆದಕೊಂಡು ಸರ್ಕಾರಿ, ಖಾಸಗಿ ಕಛೇರಿಗಳಲ್ಲಿ ಉದ್ಯೋಗ, ಬೋಧನೆ, ಪೌರೋಹಿತ್ಯ, ವ್ಯವಸಾಯ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಕೆಲವರು ದೇವಾಲಯದ ಅರ್ಚಕ ವೃತ್ತಿಯ ಜತೆಗೆ ಉಪವೃತ್ತಿಗಳನ್ನು ನಿರ್ವಹಿಸುವವರೂ ಇದ್ದಾರೆ. ಇವರ ಆರ್ಥಿಕ ಸ್ಥಿತಿ ಉತ್ತಮವಾಗಿದ್ದು ವಾರ್ಷಿಕ ೨೦,೦೦೦/- ಮೇಲ್ಪಟ್ಟು ಆದಾಯವುಳ್ಳವರಾಗಿದ್ದಾರೆ. ಸಾಂಪ್ರದಾಯಿಕ ವಿವಾಹಕ್ಕೆ ಹೆಚ್ಚಿನ ಆದ್ಯತೆ ಕೊಡುವ ಇವರು ಪ್ರೇಮವಿವಾಹ, ಅಂತರ್ಜಾತಿ ವಿವಾಹ, ವಿಧವಾ ವಿವಾಹ ಇತ್ಯಾದಿಗಳನ್ನು ಒಪ್ಪುವುದಿಲ್ಲ, ಪ್ರೋತ್ಸಾಹಿಸುವುದಿಲ್ಲ. ವರದಕ್ಷಿಣೆ, ವಧುದಕ್ಷಿಣೆ ತಮ್ಮಲ್ಲಿಲ್ಲ ಎಂದರೂ ಸೂಕ್ಷ್ಮವಾಗಿ ಗಮನಿಸಿದಾಗ ವಸ್ತುಗಳ ರೂಪದಲ್ಲಿ ವರದಕ್ಷಿಣೆಯ ಬಾಬ್ತು ಸಂದಾಯವಾಗುತ್ತಿದೆ. ದೇವಸ್ಥಾನ, ಛತ್ರಗಳಲ್ಲಿ ಮೂರು ದಿನಗಳ ಕಾಲ ವಿವಾಹ ಸಂಭ್ರಮವೇರ್ಪಡುತ್ತದೆ. ಶುದ್ಧಶಾಖಾಹಾರಿ ಊಟ ಮಾತ್ರ, ಸಿಹಿತಿಂಡಿ ವಿವಾಹದ ಭೋಜನ ವ್ಯವಸ್ಥೆಯಿರುತ್ತದೆ. ಬ್ರಾಹ್ಮಣರು ಬಹುಪಾಲು ಶುದ್ಧ ಆಸ್ತಿಕರು. ಧಾರ್ಮಿಕ ನಂಬಿಕೆ ಅಚಲವಾಗಿರುವವರು. ಇವರುಗಳೆಲ್ಲಾ 'ಶ್ರೀ ವೈಷ್ಣವ' ಧರ್ಮಅನುಯಾಯಿಗಳು. ವಿಷ್ಣುವಿನ ದಶಾವತಾರಗಳ ಜತೆಗೆ ಶ್ರೀದೇವಿ, ಭೂದೇವಿ, ಲಕ್ಷ್ಮಿ, ಸರಸ್ವತಿ, ದುರ್ಗಾ ಇತ್ಯಾದಿ ದೇವತೆಗಳನ್ನು ಪೂಜಿಸುತ್ತಾರೆ. ಹಣೆಯ ಮೇಲೆ ಎರಡು ಬಿಳಿ ಮಧ್ಯೆ ಕೆಂಪು ಬಣ್ಣ ಇರುವ ಮೂರು ನಾಮಗಳನ್ನು ಧರಿಸುತ್ತಾರೆ. ಜನಿವಾರ ಎಂಬ ಹತ್ತಿಯ ದಾರವನ್ನು ದೇಹದ ಮೇಲೆ ಕಡ್ಡಾಯವಾಗಿ ಧರಿಸುತ್ತಾರೆ. ಅತ್ಯಂತ ಕಟ್ಟುನಿಟ್ಟಾಗಿ ಜಾತಿವ್ಯವಸ್ಥೆಯನ್ನು ಕಾಪಾಡಿಕೊಂಡು ಬಂದಿರುವ ಇವರು ಅನ್ಯ ಜಾತಿಯೊಂದಿಗೆ ಸಹ ಭೋಜನ, ಮನೆಯೊಳಗೆ ಬಿಟ್ಟುಕೊಳ್ಳುವುದು ಇತ್ಯಾದಿಗಳನ್ನು ಮಾಡುವುದಿಲ್ಲ. ಆದರೆ ಇತರೆ ಜನಾಂಗಗಳ ಬಗೆಗೆ ಕೀಳು ತುಚ್ಛ ಭಾವನೆಗಳನ್ನು ಹೊಂದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಆದರೂ ಇತ್ತೀಚೆಗೆ ಇವರ ಆಚರಣೆ ಮಡಿವಂತಿಕೆಯೂ ಕಡಿಮೆಯಾಗುತ್ತಾ ಇರುವುದನ್ನು ಕಾಣಬಹುದು.

**ಒಕ್ಕಲಿಗರು:** ಕಬ್ಬತ್ತಿ ಗ್ರಾಮದಲ್ಲಿರುವ ಬಹುಸಂಖ್ಯಾತರಾಗಿರುವ ಒಕ್ಕಲಿಗ ಸಮುದಾಯದವರು ಗೌಡ, ರೈತ, ಒಕ್ಕಲಿಗ, ಒಕ್ಕಲುಮಕ್ಕಲು, ಮಣ್ಣಿನ ಮಕ್ಕಳು ಇತ್ಯಾದಿ

ಹೆಸರುಗಳಿಂದ ಕರೆಯಲ್ಪಡುವ ಈ ಜನಾಂಗದವರು ವ್ಯವಸಾಯವನ್ನೇ ಪ್ರಧಾನ ವೃತ್ತಿಯನ್ನಾಗಿ ಮಾಡಿಕೊಂಡು ಅದನ್ನಾಶ್ರಯಿಸಿಯೇ ಜೀವನ ನಡೆಸುತ್ತಿದ್ದಾರೆ. ವ್ಯವಸಾಯಕ್ಕೆ ಜಮೀನುಗಳಿಲ್ಲದ ಒಕ್ಕಲಿಗರು ವ್ಯವಸಾಯ ಸಂಬಂಧ ಕೂಲಿ ಕೆಲಸ ಮತ್ತು ಮೇಕೆ, ಕುರಿ, ಹಸು, ಎಮ್ಮೆ, ಇತ್ಯಾದಿಗಳನ್ನು ಸಾಕುವ ಉಪವೃತ್ತಿ ಯನ್ನಾಶ್ರಯಿಸಿದ್ದಾರೆ. ಸುಮಾರು ಒಂದು ಸಾವಿರಕ್ಕೂ ಅಧಿಕ ಇರುವ ಜನಸಂಖ್ಯೆಯಲ್ಲಿ ಗಂಡಸರು ಹೆಂಗಸರು ಸಮಪ್ರಮಾಣದಲ್ಲಿದ್ದಾರೆ.

ಒಕ್ಕಲಿಗರಿಗಾಗಿಯೇ ಪ್ರತ್ಯೇಕ ಕೇರಿ ಇದ್ದು ಅಲ್ಲಿ ಪೂರ್ಣವಾಗಿ ನೆಲಸಿರುವರು ಇವರುಗಳೇ, ಇಲ್ಲಿರುವ ಬಹುಪಾಲು ಒಕ್ಕಲಿಗರು ಗಂಗಡಿಕಾರ ಅಥವಾ ಮುಳ್ಳು ಒಕ್ಕಲಿಗರು ಮತ್ತು ದಾಸ ಒಕ್ಕಲಿಗರು ಎಂಬ ಪಂಗಡಗಳಿವೆ. ಉನ್ನತ ವ್ಯಾಸಂಗಕ್ಕೆ, ವ್ಯಾಪಾರ, ಸರ್ಕಾರಿ ನೌಕರಿಗೆ ಹೊರಹೋದ ಜನರು ಮಾತ್ರ ಕಬ್ಬತ್ತಿಯ ಹೊರಗಡೆ ನೆಲಸಿದ್ದಾರೆ. ಇನ್ನುಳಿದಂತೆ ಎಲ್ಲರೂ ಕಬ್ಬತ್ತಿ ಗ್ರಾಮದಲ್ಲಿಯೇ ವಾಸವಿದ್ದಾರೆ. ಇವರುಗಳು ನೀರಾವರಿ ಬೇಸಾಯಕ್ಕಿಂತ ಮಳೆ ಆಶ್ರಿತ ಬೇಸಾಯವೇ ಹೆಚ್ಚು. ಕೆರೆಗಳ ಹಿಂಬಾಗದಲ್ಲಿನ ಜಮೀನಿನವರು ಮತ್ತು ಕೊಳವೆ ಬಾವಿ ಕೊರಸಿಕೊಂಡವರು ಮಾತ್ರ ಕೃತಕ ನೀರಾವರಿ ಪದ್ಧತಿಯಲ್ಲಿ ವ್ಯವಸಾಯವನ್ನು ಮಾಡುತ್ತಾರೆ. ರಾಗಿ, ಜೋಳ, ಆಲೂಗೆಡ್ಡೆ ಪ್ರಮುಖವಾದ ಬೆಳೆಯಾಗಿದ್ದು ಭತ್ತ, ತರಕಾರಿ ಬೆಳೆಗಳನ್ನು ಸಹ ಬೆಳೆಯುತ್ತಾರೆ. ಜತೆಯಲ್ಲಿಯೇ ಪಶುಪಾಲನೆ, ಕುರಿ, ಮೇಕೆಸಾಗಣೆ ಮಾಡುತ್ತಾರೆ. ಹಾಲು-ಹೈನು, ಗೊಬ್ಬರದ ಜತೆಗೆ ಮಾಂಸಕ್ಕೂ ಇವು ಸಹಾಯಕವಾಗುತ್ತದೆ. ಆರ್ಥಿಕ ಸ್ಥಿತಿಯ ಸಾಧಾರಣವಾದುದಾಗಿದೆ. ಎಲ್ಲೋ ಕೆಲವು ಮನೆಗಳವರು ವ್ಯವಸಾಯದ ಜತೆಗೆ ವ್ಯಾಪಾರ, ಕಂಟ್ರ್ಯಾಕ್ಟರ್ ಕೆಲಸ, ಸರ್ಕಾರಿ ಉದ್ಯೋಗ ಹೊಂದಿ ಉತ್ತಮ ಸ್ಥಿತಿಯಲ್ಲಿದ್ದಾರೆ. ವಿವಾಹ ಸಂಬಂಧವು ಗ್ರಾಮದ ಸುತ್ತಮುತ್ತಲಿನ ಗ್ರಾಮಗಳಿಗೆ ಹೆಣ್ಣು ಕೊಡುವ ಹೆಣ್ಣು ತರುವ ಪ್ರವೃತ್ತಿಯನ್ನು ನಾವು ನೋಡಬಹುದಾಗಿದೆ. ವಿವಾಹದಲ್ಲಿ ವಧುದಕ್ಷಿಣೆ ಇರದೆ ವರದಕ್ಷಿಣೆ ಪ್ರಮುಖವಾಗಿದೆ. ನಗದು, ಚಿನ್ನ, ಸೈಟು, ಮನೆ, ಮೋಟಾರು ಇತ್ಯಾದಿಗಳ ರೂಪದಲ್ಲಿ ವರದಕ್ಷಿಣೆ ನೀಡುತ್ತಾರೆ. ಗಂಡು ಶ್ರೀಮಂತ ಮನೆತನಕ್ಕೆ ಸೇರಿದ್ದು ಆರ್ಥಿಕವಾಗಿ ಉತ್ತಮಸ್ಥಿತಿಯಲ್ಲಿದ್ದರೆ, ಸರ್ಕಾರಿ ನೌಕರಿ ಇದ್ದರೆ ವರದಕ್ಷಿಣೆ ಪ್ರಮಾಣವು ಹೆಚ್ಚಾಗಿರುತ್ತದೆ. ಸ್ವಂತ ಮನೆಗಳ ಮುಂದೆ ದೇವಸ್ಥಾನಗಳಲ್ಲಿ ಮತ್ತು ಛತ್ರಗಳಲ್ಲಿ ವಿವಾಹದ ಕಾರ್ಯವನ್ನು ನೆರವೇರಿಸುತ್ತಾರೆ.

ಬಹುಪಾಲು ಒಕ್ಕಲಿಗರು ವೈಷ್ಣವ ಮತಾವಲಂಬಿಗಳಾಗಿದ್ದಾರೆ. ಇದೇ ಗ್ರಾಮದ ಶ್ರೀರಂಗನಾಥಸ್ವಾಮಿ, ತಿರುಪತಿ ತಿಮ್ಮಪ್ಪ ದೇವರುಗಳನ್ನು ಆರಾಧಿಸುತ್ತಾರೆ. ಅಲ್ಲದೇ ಗ್ರಾಮದೇವತೆಗಳಾದ ಮಾರಮ್ಮ ಮೊದಲಾದ ದೇವತೆಗಳ ಹಬ್ಬವನ್ನು ಆಚರಿಸುತ್ತಾರೆ. ಕೆಲವು ಹಬ್ಬಗಳಲ್ಲಿ ಸಿಹಿ ಅಡುಗೆಯನ್ನು ಕೆಲವು ಹಬ್ಬಗಳಲ್ಲಿ ಖಾರದ (ಮಾಂಸದ)

ಅಡುಗೆಯನ್ನು ಮಾಡುವ ಸಂಪ್ರದಾಯ ಇವರುಗಳಲ್ಲಿದೆ. ಸತ್ತವರಿಗೆ ಎಡೆಯಿಡುವ ಆಚರನೆ ಇವರಲ್ಲಿದೆ. ಪ್ರತಿ ವರ್ಷ ಮಹಾಲಯ ಅಮಾವಾಸ್ಯೆಗಳಂದು ಮಾಂಸಾಹಾರದ ಅಡುಗೆಯೊಂದಿಗೆ ಇದನ್ನು ನೆರವೇರಿಸುತ್ತಾರೆ ಕೆಲವರು ಸಿಹಿ ಅಡುಗೆಯೊಂದಿಗೆ ನೆರವೇರಿಸುವವರು ಇದ್ದಾರೆ. ಶನಿ ಮಹಾತ್ಮನ ಕಥೆ ಓದಿಸುವುದು, ಸತ್ಯನಾರಾಯಣ ಪೂಜೆ ಓದಿಸುವುದು ಇತ್ಯಾದಿ ಸಂಪ್ರದಾಯಗಳು ರೂಢಿಯಲ್ಲಿವೆ. ಜನನ, ಮರಣ, ಮನೆಯ ಮಗಳು ಋತುಮತಿಯಾದಾಗ ಸೂತಕವನ್ನು ಕಳೆದುಕೊಳ್ಳಲು ತಪ್ಪದೇ ಜಾತಿಯ ದಾಸಯ್ಯ, ಜೋಗಯ್ಯರನ್ನು ಕರೆಸಿ ವಿಶೇಷ ಪೂಜೆ ಏರ್ಪಡಿಸುತ್ತಾರೆ. ಮನೆ ಸ್ವಚ್ಚಗೊಳಿಸಿ, ಮಡಿಯುಟ್ಟು ಕಲ್ಯಾಣಿಯಿಂದ ನೀರು ತಂದು ಮನೆಗೆ ಚಿಮುಕಿಸಿ ಸೂತಕ ಕಳೆದುಗೊಳ್ಳುತ್ತಾರೆ.

**ಆದಿ ಕರ್ನಾಟಕದವರು:** ಹರಿಜನರು, ಪಂಚಮರು, ದಲಿತರು, ಹೊಲೆಯರು, ಅಂತ್ಯಜರು, ಬಲಗೈನವರು, ಎ.ಕೆ.ಗಳು, ಎಸ್.ಸಿ.ಗಳು ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವ ಆದಿ ಕರ್ನಾಟಕ ದವರು ಕಬ್ಬತ್ತಿ ಗ್ರಾಮದಲ್ಲಿ ಬಹು ಪ್ರಾಚೀನ ಕಾಲದಿಂದಲೂ ವಾಸವಿದ್ದಾರೆ. ಪ್ರಸ್ತುತ ಈ ಗ್ರಾಮದಲ್ಲಿ ಮೂವತ್ತರಿಂದ ನಲವತ್ತು ಕುಟುಂಬಗಳು ಇರುವ ಇವರ ಸಂಖ್ಯೆ ಬಹಳ ಕಡಿಮೆ ಇದ್ದುದಾಗಿದೆ. ಇವರುಗಳಲ್ಲಿ ಕೆಲವರಿಗೆ ಜಮೀನು ಇದ್ದು ವ್ಯವಸಾಯ ವೃತ್ತಿಯನ್ನು ಅವಲಂಭಿಸಿದ್ದಾರೆ. ಕೆಲವರು ಸರ್ಕಾರಿ ಮತ್ತು ಅರೆಸರ್ಕಾರಿ ಕಛೇರಿಗಳಲ್ಲಿ ನೌಕರಿ ಹೊಂದಿದ್ದಾರೆ. ಮತ್ತೆ ಕೆಲವರು ಕೂಲಿ ಕೆಲಸವನ್ನು ಅವಲಂಭಿಸಿ ಜೀವನ ಹೊರೆಯುತ್ತಿದ್ದಾರೆ. ಆರ್ಥಿಕ ಸ್ಥಿತಿ ಅಷ್ಟೇನು ಉತ್ತಮ ಮಟ್ಟದಲ್ಲಿಲ್ಲದೆ ಸಾಧಾರಣವಾಗಿದೆ. ಇವರುಗಳಲ್ಲಿ ಉಂಟಾಗುವ ಜಗಳ, ಗಲಾಟೆ ಹೊಡೆದಾಟ ಇತ್ಯಾದಿಗಳ ನಿರ್ಣಯಕ್ಕೆ ಅವರಲ್ಲಿಯೇ ನ್ಯಾಯ ಪಂಚಾಯ್ತಿಗಳಿದ್ದು ಅವುಗಳಿಂದ ಬಗೆಹರಿಯದಿದ್ದರೆ ಸ್ಥಳೀಯ ಆರಕ್ಷಕ ಕಛೇರಿಗೆ ಹೋಗುತ್ತಾರೆ. ಇತ್ತೀಚೆಗೆ ಇವರುಗಳಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗಿರುವುದು ಆಶಾದಾಯಕವಾದ ಬೆಳವಣಿಗೆ.

ಆದಿ ಕರ್ನಾಟಕದವರಲ್ಲಿ ಬಾಲ್ಯವಿವಾಹ, ವಿಧವಾ ವಿವಾಹಗಳು ಇಲ್ಲ. ಅಲ್ಲಿ ಇಲ್ಲಿ ಅಪರೂಪಕ್ಕೊಮ್ಮೆ ಕೂಡಿಕೆಯ ವಿವಾಹಗಳು ಜರುಗುತ್ತವೆ. ಬಹುತೇಕ ವಿವಾಹಗಳು ಸಂಬಂಧಗಳಲ್ಲಿಯೂ ನೆಂಟರು, ಬಂದುಗಳಲ್ಲಿ ನಡೆಯುತ್ತದೆ. ಅಪರೂಪಕ್ಕೊಮ್ಮೆ ಹೊಸ ಸಂಬಂಧಗಳಲಿಯೂ ವಿವಾಹ ಜರುಗುತ್ತವೆ. ವಧುದಕ್ಷಿಣೆ ಇವರುಗಳಲ್ಲಿಲ್ಲ. ವರದಕ್ಷಿಣೆ ಅಸ್ತಿತ್ವದಲ್ಲಿದ್ದು ಇದು ಗಂಡಿನ ಯೋಗ್ಯತೆ, ಶ್ರೀಮಂತಿಕೆ, ಹೆಣ್ಣು ಹೆತ್ತವರ ಆರ್ಥಿಕ ಸಾಮರ್ಥ್ಯದ ಮೇಲೆ ಅವಲಂಭಿತವಾಗಿರುತ್ತದೆ. ಗಂಡಿನ ಕಡೆಯವರು ಹೆಣ್ಣಿಗೆ ಸೀರೆ, ತಾಳಿ, ಕಾಲುಂಗುರಗಳನ್ನು ಕಡ್ಡಾಯವಾಗಿ ನೀಡುತ್ತಾರೆ. ತಮ್ಮ ತಮ್ಮ ಮನೆಗಳ ಮುಂದೆ ಕೆಲವು ಸಂದರ್ಭಗಳಲ್ಲಿ ದೇವಾಲಯಗಳಲ್ಲಿ ಇವರು

ವಿವಾಹಗಳು ಜರುಗುತ್ತವೆ. ವಿವಾಹದಲ್ಲಿ ಕಡ್ಡಾಯವಾಗಿ ಸಸ್ಯಹಾರವನ್ನು ಬಳಸುತ್ತಾರೆ. ಬಹುತೇಕವಾಗಿ ಇವರು ವೈಷ್ಣವ ಮತಾವಲಂಭಿಗಳಾಗಿದ್ದಾರೆ. ಶ್ರೀರಂಗನಾಥ ಸ್ವಾಮಿಯ ಜತೆಗೆ ಮಾರಮ್ಮ, ಯಲ್ಲಮ್ಮ ಮೊದಲಾದ ಗ್ರಾಮದೇವತೆಗಳನ್ನು ಪೂಜಿಸುತ್ತಾರೆ. ದೇವರುಗಳಿಗೆ ಕೋಳಿ ಬಲಿ ಕೊಡುವ ಪದ್ಧತಿ ಆಚರಣೆಯಲ್ಲಿದೆ. ಶನಿ ಮಹಾತ್ಮನ ಕಥೆ ಓದಿಸುವುದು, ಸತ್ಯನಾರಾಯಣಪೂಜೆ ಮಾಡಿಸುವುದು ರೂಢಿಯಲ್ಲಿದೆ. ಹುಟ್ಟು, ನಾಮಕರಣ, ಮದುವೆ, ಸಾವು ಇತ್ಯಾದಿ ಸಂದರ್ಭಗಳಲ್ಲಿ ಮೇಲ್ವರ್ಗದ ಗುರುಗಳನ್ನು ಕರೆತಂದು ಪೂಜಾ ಆಚರಣೆ ನಡೆಸಿ ಸೂತಕ ಕಳೆದುಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಅವರ ಜಾತಿಯ ಗುರುಗಳನ್ನೇ ಕರೆ ತರುತ್ತಾರೆ. ಸತ್ತವರಿಗೆ ಎಡೆಯಿಡುವ ಪದ್ಧತಿ ರೂಢಿಯಲ್ಲಿದ್ದು ಮಹಾಲಯ ಅಮಾವಾಸ್ಯೆಯಂದು ಇದನ್ನು ನೆರವೇರಿಸುತ್ತಾರೆ. ಸತ್ತವರನ್ನು ಹೂಳುವ, ಸುಡುವ ಪದ್ಧತಿ ರೂಢಿಯಲ್ಲಿದೆ, ಅಕ್ಕಿ ಮತ್ತು ರಾಗಿ ಪ್ರಮುಖ ಆಹಾರ ಧಾನ್ಯಗಳಾಗಿದ್ದು ರಾಗಿಮುದ್ದೆ, ರಾಗಿರೊಟ್ಟಿ ಅನ್ನ ಜತೆಗೆ ಇಡ್ಲಿ, ಒಡೆ, ಚಿತ್ರಾನ್ನಗಳೂ ಇಂದು ಬಳಕೆಯಾಗುತ್ತಿವೆ. ಶ್ರಮದಾಯಕ ಕೆಲಸ ಮಾಡುವ ಇವರಿಗೆ ರಾಗಿರೊಟ್ಟಿ, ರಾಗಿಮುದ್ದೆ ಪ್ರಿಯವಾದ ಊಟವಾಗಿದೆ. ಹಬ್ಬ-ಹರಿದಿನ ಸಂದರ್ಭಗಳಲ್ಲಿ ಒಬ್ಬಟ್ಟು, ವಡೆ, ಪಯಸ, ಕೇಸರಿಬಾತು, ಖಾರಾಬಾತು ಇತ್ಯಾದಿಗಳನ್ನು ಮಾಡುತ್ತಾರೆ. ಮಾಂಸಾಹರಿಗಳಾದ ಇವರು ಮಾಂಸಾಹಾರ ಪ್ರಿಯರು. ಕುರಿ, ಆಡು, ಕೋಳಿ, ಮೀನು ಇತ್ಯಾದಿಗಳ ಮಾಂಸವನ್ನು ಸೇವಿಸುತ್ತಾರೆ.

**ಅಗಸರು:** ಮಡಿವಾಳ ಶೆಟ್ಟರು, ದೋಬಿ, ಅಗಸರು, ಬಟ್ಟೆ ಸೆಣೆಯುವವರು ಇತ್ಯಾದಿಗಳಿಂದ ಕರೆಯಲ್ಪಡುವ ಈ ಜನಾಂಗದವರು ಕಬ್ಬತ್ತಿ ಗ್ರಾಮದಲ್ಲಿ ಕೆಲವೇ ಕುಟುಂಬಗಳು ವಾಸವಿದ್ದಾರೆ. ಇವರೊಳಗೆ ದಾಸ ಮನೆತನದ ಶೆಟ್ಟರು ಮತ್ತು ಈರಮ್ಮನ ಒಕ್ಕಲು ಎಂಬ ಎರಡು ಒಳಪ್ರಭೇದಗಳಿವೆ. ಇವರು ಮನೆ - ಮನೆಗಳಿಂದ ಬಟ್ಟೆಗಳನ್ನು ತೆಗೆದುಕೊಂಡು ಹೋಗಿ ಒಗೆದು ಇಸ್ತ್ರಿ ಮಾಡಿಕೊಡುವುದು ಇವರ ಮೂಲ ಕಸುಬು. ಆದರೆ ಇಂದು ಬಟ್ಟೆ ಹೊಗೆಯುವ ಇವರಿಗೆ ಕೊಡುವವರ ಸಂಖ್ಯೆ ಬಹಳ ಕಡಮೆ ಆಗಿದೆ. ಪೆಟ್ಟಿ ಅಂಗಡಿಗಳಲ್ಲಿ ಇಟ್ಟುಕೊಂಡು ಇಸ್ತ್ರಿ ಮಾಡುವ ವ್ಯವಸಾಯ ಮಾಡುವ ಕೂಲಿ ಕೆಲಸ ಮಾಡುವ ಕಾರ್ಯಗಳಾಗಿ ಇವರು ಮಾಡುತ್ತಾರೆ. ಇಂತಿಷ್ಟೆಂದು ಕಾರ್ಯಕ್ಕೆ ಮನೆಗಳನ್ನು ಹಂಚಿಕೊಂಡಿರುವ ಇವರು ಬಟ್ಟೆ ಒಗೆದದಕ್ಕೆ ವರ್ಷಕ್ಕೊಮ್ಮೆ ಧಾನ್ಯ ರೂಪದಲ್ಲಿ ಹಡದೆ ಪಡೆಯುತ್ತಾರೆ. ಇಂದು ಇದು ಕಡಿಮೆಯಾಗಿ ಹಣದ ರೂಪದಲ್ಲಿಯೇ ಇದನ್ನು ಪಡೆಯುತ್ತಾರೆ. ಆರ್ಥಿಕವಾಗಿ ಸಾಧಾರಣ ಸ್ಥಿತಿಯವರಾದ ಇವರು ವಾರ್ಷಿಕ ೧೦,೦೦೦ಕ್ಕೂ ಹೆಚ್ಚು ಆದಾಯವನ್ನು ಹೊಂದಿದ್ದಾರೆ. ಈ ಜನಾಂಗದಲ್ಲಿ ಬಾಲ್ಯವಿವಾಹ ವಿಧವಾವಿಹಾಹ, ಕೂಡಿಕೆ ಪದ್ಧತಿಗಳು

ಈಗ ಇಲ್ಲ. ಮದುವೆಗಳನ್ನು ಹೆಚ್ಚಾಗಿ ಸಂಬಂಧಗಳಲ್ಲಿಯೇ ನಡೆಸಲು ಇಷ್ಟಪಡುವ ಇವರು ಸೂಕ್ತವಧು/ವರ ಸಿಗದಿದ್ದಾಗ ಹೊಸ ಸಂಬಂಧಗಳಲ್ಲಿ ನಡೆಸುತ್ತಾರೆ. ವಿವಾಹದಲ್ಲಿ ವರದಕ್ಷಿಣೆ ಪದ್ಧತಿ ಚಾಲ್ತಿಯಲ್ಲಿದ್ದು ವಧುದಕ್ಷಿಣೆ ನಿಂತು ಹೋಗಿದೆ. ಹಣ, ಪದಾರ್ಥಗಳ ರೂಪದಲ್ಲಿ ವರದಕ್ಷಿಣೆಯನ್ನು ನೀಡಲಾಗುತ್ತದೆ. ಮದುವೆಗಳು ಅವರವರ ಆರ್ಥಿಕ ಸಾಮರ್ಥ್ಯದ ಮೇಲೆ ಅವಲಂಭಿತವಾಗಿರುತ್ತದೆ. ಮದುವೆಯ ದಿನದಂದು ಸಿಹಿ ಊಟವಿಟ್ಟು ಅನಂತರ ಬೀಗರ ಊಟದಲ್ಲಿ ಮಾಂಸದ ಅಡುಗೆ ಮಾಡುತ್ತಾರೆ. ಅಗಸರು ಬಹುಪಾಲು ಆಸ್ತಿಕರಾಗಿದ್ದು ತಿರುಪತಿ ತಿಮ್ಮಪ್ಪ, ಬೆಂಗಳೂರು ವಡಿಮಾಳ ಮಾಚಿದೇವರು ಇವರ ಪ್ರಮುಖ ದೈವಗಳು. ಇವುಗಳಲ್ಲಿದೆ ಶ್ರೀರಂಗನಾಥಸ್ವಾಮಿ, ಕಾರ್ಲೆ ಹುಚ್ಚಮ್ಮ, ಲಕ್ಷ್ಮಿದೇವಿ ಇತ್ಯಾದಿ ದೇವತೆಗಳನ್ನು ಪೂಜಿಸುತ್ತಾರೆ. ಪಿತೃಪಕ್ಷವನ್ನು ಮಹಾಲಯ ಅಮಾವಾಸ್ಯೆಯಲ್ಲಿ ಮಾಡುತ್ತಾರೆ. ಶನಿ ಮಹಾತ್ಮೆಯ ಪೂಜೆಯನ್ನು ಓದಿಸುವ ರೂಢಿ ಇವರಲ್ಲಿದೆ. ಕೆಲವು ದಾಸ ಮನೆತನಗಳಲ್ಲಿ ದಾಸಯ್ಯಗಳನ್ನು ಬಿಡುವ ಸಂಪ್ರದಾಯವಿದೆ. ಪೂಜೆ-ಪುನಸ್ಕಾರಗಳಿಗೆ ತಮ್ಮ ಜಾತಿಯ ದಾಸಯ್ಯರ ಜತೆಗೆ ಮೇಲ್ಜಾತಿಯ ಜೋಯಿಸರನ್ನು ಕರೆಸಿ ವಿಧಿಗಳನ್ನು ನೆರವೇರಿಸಕೊಳ್ಳುತ್ತಾರೆ. ಸತ್ತವರಿಗೆ ಎಡೆಯಿಡುವ ಪದ್ಧತಿ ರೂಢಿಯಲ್ಲಿದ್ದು ಪ್ರತಿವರ್ಷ ಮಹಾಲಯ ಅಥವಾ ಆಯದ ಪೂಜೆಯಂದು ಎಡೆ ಇಟ್ಟು ಪೂಜೆ ಸಲ್ಲಿಸುವ ಪದ್ಧತಿ ಜಾರಿಯಲ್ಲಿದೆ. ಇವರುಗಳಲ್ಲಿ ಕೆಲವರು ಮಾಂಸದ ಅಡುಗೆಯನ್ನು ಮಾಡಿದರೆ ಮತ್ತೆ ಕೆಲವರು ಸಿಹಿ ಅಡುಗೆಯನ್ನು ಮಾಡಿ ಎಡೆಗೆ ಬಡಿಸುತ್ತಾರೆ.

**ನಯನಜ ಕ್ಷತ್ರಿಯರು (ಕ್ಷೌರಿಕರು):** ನಯನಜಕ್ಷತ್ರಿಯ, ನಾಯಿಂದ, ಕ್ಷೌರಿಕ, ಹಡಪದವರು, ಭಜಂತ್ರಿ ಇನ್ನೂ ಮುಂತಾದ ಹೆಸರುಗಳಿಂದ ಇವರುಗಳನ್ನು ಕರೆಯುತ್ತಾರೆ. ಕಬ್ಬತ್ತಿ ಗ್ರಾಮದಲ್ಲಿ ಸುಮಾರು ಐದಾರು ಕುಟುಂಬಗಳಿದ್ದು ಇವರಲ್ಲಿ ಯಾವ ಒಳಪಂಗಡ, ಪ್ರಭೇದಗಳು ಇಲ್ಲ. ಇವರು ಕ್ಷೌರದ ಜತೆಗೆ ದೇವಸ್ಥಾನದ ವಾದ್ಯದ ಕೈಂಕರ್ಯವನ್ನು ಮಾಡುತ್ತಾರೆ. ಇದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಇದನ್ನು ಗಮನಿಸಿದರೆ ಬಹು ಪ್ರಾಚೀನ ಕಾಲದಿಂದಲೂ ಈ ಜನಾಂಗ ಕಬ್ಬತ್ತಿ ಗ್ರಾಮದಲ್ಲಿದ್ದಿರಬೇಕೆಂದು ನಂಬಬಹುದಾಗಿದೆ. ಇವರು ವಾದ್ಯಗೋಷ್ಠಿಯಲ್ಲಿ ಡೋಲು, ನಾಗಸ್ವರ, ತಾಳ, ಶ್ರುತಿ ಇತ್ಯಾದಿಗಳನ್ನು ನುಡಿಸುತ್ತಾರೆ. ಇವರು ಪಟ್ಟಣಗಳಿಗೆ ಹೋಗಿ ಕ್ಷೌರದ ಅಂಗಡಿಗಳನ್ನು ಇಟ್ಟುಕೊಂಡಿದ್ದಾರೆ. ಈ ವೃತ್ತಿಗೆ ಬೇರೆ, ಜನಾಂಗದವರ ಆಗಮನ ಇಲ್ಲದಿರುವುದರಿಂದ ಸದ್ಯಕ್ಕೆ ಯಾವ 'ವೃತ್ತಿ ಪ್ರೈಪೋಟಿ' ಇವರಲ್ಲಿಲ್ಲ. ಅಲ್ಲದೇ ದೇವಸ್ಥಾನದ ಬಳಿ 'ಮುಡಿಕೊಡುವ' ಪದ್ಧತಿ ಇರುವುದರಿಂದ ಬರುವ ಭಕ್ತರಲ್ಲಿ ಹರಕೆ ಹೊತ್ತವರು ಕೇಶ ಮುಂಡನ ಮಾಡಿಕೊಳ್ಳುತ್ತಾರೆ. ಇದೂ ಸಹ ಅವರ ಆರ್ಥಿಕಾದಾಯಕ್ಕೆ ಸಹಕಾರಿಯಾಗಿದೆ.

ಇಲ್ಲಿನ ಕ್ಷೌರಿಕರು ಬಹುಪಾಲು ಧಾಮಿಕ ಮನೋಭಾವವುಳ್ಳವರಾಗಿದ್ದಾರೆ. ಇವರ ಮೇಲೆ ವೈಷ್ಣವ ಧರ್ಮದ ಪ್ರಭಾವ ಗಾಢವಾಗಿ. ಶ್ರೀರಂಗನಾಥಸ್ವಾಮಿ, ತಿರುಪತಿ ತಿಮ್ಮಪ್ಪ, ಲಕ್ಷ್ಮಿದೇವಿ, ಭೂತಪ್ಪ ಮೊದಲಾದ ದೇವರುಗಳನ್ನು ಆರಾಧಿಸುತ್ತಾರೆ. ವಿಶೇಷ ಹಬ್ಬಗಳಾಗಿ ವೈರಮುಡಿ ಉತ್ಸವ, ಮಹಾಲಯ ಅಮಾವಾಸ್ಯಗಳನ್ನು ಆಚರಿಸುತ್ತಾರೆ. ಮಹಾಲಯ ಅಮಾವಾಸ್ಯೆಯಂದು ಸತ್ತ ಹಿರಿಯರಿಗೆ ಎಡೆ ಇಡುವ ಆಚರಣೆ ಇದ್ದು ಅಂದು ಮಾಂಸಾಹಾರದ ಅಡುಗೆ ಮಾಡಿ ಎಡೆ ಇಡುತ್ತಾರೆ. ಅಲ್ಲದೇ ಮನೆಯಲ್ಲಿ ಸತ್ಯನಾರಾಯಣ ಪೂಜೆ ನಡೆಸುವುದು, ಶನಿ ಮಹಾತ್ಮನ ಕಥೆ ಓದಿಸುವುದು, ದಾಸಯ್ಯರನ್ನು ಬಿಡುವುದು ಇತ್ಯಾದಿ ಆಚರಣೆಗಳು ಇವರಲ್ಲಿದೆ. ಹುಟ್ಟು, ನಾಮಕರಣ, ಸೂತಕ, ಮದುವೆ, ಶ್ರಾದ್ಧ ಇತ್ಯಾದಿ ಸಂದರ್ಭಗಳಲ್ಲಿ ಮೇಲ್ವರ್ಗದ ಬ್ರಾಹ್ಮಣ ಪುರೋಹಿತರನ್ನು ಕರೆದು ಈ ಆಚರಣೆಗಳನ್ನು ನೆರವೇರಿಸಿಕೊಳ್ಳುತ್ತಾರೆ. ಶ್ರಾವಣ ಶನಿವಾರ ಆಚರಣೆಯ ಸಂದರ್ಭದಲ್ಲಿ ತಮ್ಮ ಜನಾಂಗದ ದಾಸಯ್ಯನನ್ನು ಕರೆದು ಪೂಜಿಸುತ್ತಾರೆ. ವಿಶೇಷ ಹಬ್ಬ ಹರಿದಿನಗಳಲ್ಲಿ ಒಬ್ಬಟ್ಟು, ವಡೆ, ಪಲ್ಯ, ಪಾಯಸ, ಕಜ್ಜಾಯ, ಚಕ್ಕುಲಿ, ಕೋಡುಬಳೆ ಇತ್ಯಾದಿ ತಿಂಡಿತಿನಿಸುಗಳನ್ನು ಮಾಡುತ್ತಾರೆ. ಶಾಖಾಹಾರಿ ಮಾಂಸಾಹಾರಿ ಎರಡು ವರ್ಗಕ್ಕೆ ಸೃಇದ ಇವರು ಹೆಚ್ಚು ತಿನಿಸುಗಳನ್ನು ಮಾಡುತ್ತಾನೆ. ಶಾಖಾಹಾರಿ, ಮಾಂಸಾಹಾರಿ ಎರಡು ವರ್ಣಕ್ಕೆ ಸೇರಿದ ಇವರು ಹೆಚ್ಚು ಮಾಂಸಾಹಾರ ಪ್ರಿಯರು. ಹಬ್ಬ ಹರಿದಿನಗಳ ಮರುದಿವಸ ಮಾಂಸಾಹಾರವನ್ನು ಮಾಡುತ್ತಾರೆ. ಕುರಿ, ಮೆಕೆ, ಮೀನು, ಹಂದಿ, ಮೀನುಗಳನ್ನು ತಿನ್ನುತ್ತಾರೆ.

ಬಾಲ್ಯವಿವಾಹ, ವಿಧವಾ ವಿವಾಹ, ಕೂಡಿಕೆ ಸಂಬಂಧಗಳು ಇಂದು ಆಚರಣೆಯಲ್ಲಿ ಇಲ್ಲ. ಅಲ್ಲೊಂದು ಇಲ್ಲೊಂದು ಎನ್ನುವಂತೆ ಕೂಡಿಕೆ ಸಂಬಂಧಗಳು ಜರುಗುತ್ತವೆ. ವಿವಾಹ ಹಳೆಯ ಸಂಬಂಧ ಮತ್ತು ಹೊಸ ಸಂಬಂಧ ಕೂಡಿಕೆ ಸಂಬಂಧಗಳು ಜರುಗುತ್ತವೆ. ವಿವಾಹ ಹಳೆಯ ಸಂಬಂಧ ಮತ್ತು ಹೊಸ ಸಂಬಂಧ ಎರಡರಲ್ಲೂ ಇದೆ. ವಿವಾದಲ್ಲಿ ವರದಕ್ಷಿಣೆ ಹೆಚ್ಚೆದ್ದು ಅದೊಂದು ಪಿಡುಗಾಗಿ ಪರಿಣಮಿಸಿದೆ. ಹಣ ಒಡವೆಗಳ ರೂಪದಲ್ಲಿ ಈ ವರದಕ್ಷಿಣೆ ಸಲ್ಲುತ್ತದೆ. ಈ ವ್ಯವಹಾರವು ಗುಪ್ತವಾಗಿ ನಡೆಯುತ್ತದೆ, ವಿವಾಹಗಳು ವಧು ಅಥವಾ ವರನ ಮನೆಯ ಹತ್ತಿರ, ದೇವಸ್ಥಾನದ ಹತ್ತಿರ, ಛತ್ರಗಳಲ್ಲಿ ಅವರವರ ಸಾಮಾಜಿಕ ಅಂತಸ್ತಿನ ಮೆಲೆ ನಡೆಯುತ್ತಿವೆ. ವಿವಾಹದಲ್ಲಿ ಪೂರ್ಣವಾಗಿ ಶಾಖಾಹಾರದ ಊಟವಾಗಿರುತ್ತದೆ. ಬೀಗರ ಊಟದಲ್ಲಿ ಮಾಂಸಾಹಾರವ್ನನು ಮಾಡುತ್ತಾರೆ.

**ವಿಶ್ವಕರ್ಮದವರು:** ಕಂಚು, ಕಬ್ಬಿಣ, ಚಿನ್ನ, ಮರ, ಕಲ್ಲು ಈ ಐದು ರೀತಿಯ ಸಾಮಗ್ರಿಗಳಿಂದ ಕೆಲಸ ಮಾಡುವ ಕಂಚುಗಾರ, ಕಮ್ಮಾರ, ಅಕ್ಕಸಾಲಿಗ, ಬಡಗಿ, ಶಿಲ್ಪಿ

ಈ ಐದು ವ್ಯಕ್ತಿಯವರನ್ನು ಪಾಂಚಾಳರು ಅಥವಾ ವಿಶ್ವಕರ್ಮರು ಎಂಬ ಹೆಸರಿನಿಂದ ಕರೆಯುತ್ತಾರೆ. ಇವರುಗಳಲ್ಲಿ ಚಿನ್ನ ಕೆಲಸ ಮಾಡುವ ಅಕ್ಕಸಾಲಿಗರು ಒಮದೆರಡು ಕುಟುಂಬಗಳು ಇದ್ದು ಕುಟುಂಬಗಳು ಸಹ ಇಂದು ನಗರ ಪ್ರದೇಸಕ್ಕೆ ವಲಸೆ ಹೋಗಿದ್ದಾರೆ. ಮರಗೆಲಸ ಮಾಡುವ ಬಡಗಿಗಳು, ಕಬ್ಬಿಣದ ಕೆಲಸ ಮಾಡುವ ಕಮ್ಮಾರರು ಇದ್ದು, ಅವು ಕೂಡ ಒಂದೆರಡು ಕುಟುಂಬಗಳಲ್ಲಿ ವಾಸವಿದ್ದಾರೆ. ಹೀಗಾಗಿ ಈ ಗ್ರಾಮದ ಅಲ್ಪಸಂಖ್ಯಾತ ಕುಟಂಬಗಳಾಗಿವೆ. ಇವರ ಮೇಲೆ ಬ್ರಾಹ್ಮಣ ಧರ್ಮದ ಪ್ರಭಾವ ಹೆಚ್ಚಾಗಿದ್ದು ಜನಿವಾರವನ್ನು ಹಾಕಿಕೊಳ್ಳುತ್ತಾರೆ. ಬ್ರಾಹ್ಮಣರಂತೆ ಇವರು ಸಹ ಜ್ಯೋತಿಷ್ಯ ಹೇಳುವುದ, ಪುರೋಹಿತ ವೃತ್ತಿ ನಡೆಸುವ ಉಪಕಾರ್ಯವನ್ನು ಮಾಡುತ್ತಾರೆ. ಹೀಗಾಗಿ 'ವಿಶ್ವಕರ್ಮ ಬ್ರಾಹ್ಮಣರು' ಎಂದೇ ಕರೆದುಕೊಳ್ಳುತ್ತಾರೆ, ಇವರಲ್ಲಿ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿಲ್ಲ. ಹೆಣ್ಣು-ಗಂಡು ಪ್ರಾಪ್ತ ವಯಸ್ಸಿಗೆ ಬಂದ ಅನಂತರವೇ ವಿವಾಹದ ಶಾಸ್ತ್ರ ನೆರವೇರಿಸುತ್ತಾರೆ. ವಿವಾಹದ ಸಂದರ್ಭದಲ್ಲಿ ವರದಕ್ಷಿಣೆ, ವಧುದಕ್ಷಿಣೆಗಳು ಕಂಡುಬರುವುದಿಲ್ಲ. ಬಹುತೇಕ ವಿವಾಹಗಳು ಸಂಬಂಧದೊಳಗೆ ನಡೆಯುತ್ತವೆ. ವಿವಾಹ ಅಂತಹ ಅದ್ದೂರಿಯಾಗ ನಡೆಯದೆ ಸರಳವಾಗಿ ನಡೆಯುತ್ತವೆ.

ಬ್ರಾಹಣರ ಮತ್ತು ವೈದಿಕದ ಪ್ರಭಾವಕ್ಕೆ ಅತಿ ಹೆಚ್ಚು ಪಕ್ಕಾಗಿದ್ದಾರೆ. ಧಾರ್ಮಿಕವಾಗಿ ಆಸ್ತಿಕರಾದ ಇವರು ಶಿವ, ಪಾರ್ವತಿ, ವಿಷ್ಣು, ಲಕ್ಷ್ಮಿ, ಗಣಪತಿ ಕಾಳಿಕಾಂಬ, ದುರ್ಗಾ, ಭೈರವೇಶ್ವರ, ಶ್ರೀರಂಗನಾಥಸ್ವಾಮಿ ಮೊದಲಾದ ದೇವತೆಗಳನ್ನು ಪೂಜಿಸುತ್ತಾರೆ. ಇವರು ಆರಾಧಿಸುವ ಮನೆದೈವ ನಾಗಮಂಗಲ ತಾಲ್ಲೂಕು ದೇವಲಾಪುರದ ಕಸಲಗೆರೆ, ಹರದೂರು ಶ್ರೀರಮಗನಾಥಸ್ವಾಮಿ ದೇವರುಗಳಾಗಿವೆ. ಮನೆಗಳಲ್ಲಿ ವರ್ಷಕ್ಕೊಮ್ಮೆ ಸತ್ಯನಾರಾಯಣ ಪೂಜೆ ನಡೆಸುವ ಇವರ ಹುಟ್ಟು, ನಾಮಕರಣ, ಮದುವೆ, ಸಾವು ಇತ್ಯಾದಿ ಸಂದರ್ಭಗಳಲ್ಲಿ ಸುತಕ ಕಲೆದುಕೊಳ್ಳುವ ಸಂದರ್ಭದಲ್ಲಿ ಇವರ ಜಾತಿಯವರೇ ಆದ ಗುರುಗಳು, ಪುರೋಹಿತರು ಇದ್ದು ಅವರುಗಳನ್ನು ಕರೆಸಿ ಈ ಕಾರ್ಯಗಳನ್ನು ನೆರವೇರಿಸುತ್ತಾರೆ. ಸತ್ತವರನ್ನು ಊಳುವುದು, ಸುಡುವುದು, ಎರಡು ರೀತಿಯಲ್ಲಿದೆ. ವರ್ಷಕ್ಕೊಮ್ಮೆ ಸತ್ತವರಿಗೆ ಸತ್ತಮಾಸ ಮತ್ತು ತಿಥಿಯನ್ನು ಲೆಕ್ಕಹಾಕಿ ಎಡೆ ಇಡುವ ಪದ್ಧತಿ ಇದೆ. ಇವರು ಪೂರ್ಣವಾಗಿ ಶಾಖಾಹಾರಿಗಳಾಗಿದ್ದು ಬೆಳಗ್ಗಿನ ವೇಳೆ ತಿಂಡಿಯೆಂದು ದೋಸೆ, ಇಡ್ಲಿ, ಚಪಾತಿ ಚಿತ್ರಾನ್ನ ಇತ್ಯಾದಿಗಳನ್ನು ಮಾಡುವರು.

**೫. ರಕ್ತ ಬಾಂಧವ್ಯ:**

ಕುಟುಂಬ ಯಾವ ರೂಪಕ್ಕೆ ಆಗಿರಲಿ ಅದು ಬಂಧು-ಬಾಂಧವರನ್ನು ಹೆಚ್ಚು ಹೊಂದಿರಲು ಬಯಸುತ್ತದೆ. 'ಖುಳದಲ್ಲಿ ಬಡವ - ಕುಲದಲ್ಲಿ ಬಡವನಾ?' ಎಂಬ

ಮಾತು ಇದಕ್ಕೆ ಉದಾಹರಣೆಯಾಗಿದೆ. ಹಬ್ಬಹರಿದಿನ, ಮದುವೆ, ಮುಂಜಿ, ಹುಟ್ಟು-ಸಾವು ಇತ್ಯಾದಿ ಪ್ರಮುಖ ಸಂದರ್ಭದಲ್ಲಿ ಬಂಧು ನೆಂಟರಿಷ್ಟರು ಕೂಡದಿದ್ದರೆ ಆ ಸಂದರ್ಭಕ್ಕೆ ಕಳೆಯೋ ಕೆಟ್ಟವುದಿಲ್ಲ ಎನಿಸುತ್ತದೆ. ಪ್ರತಿಯೊಂದು ಕುಟುಂಬದಲ್ಲಿ ಹುಟ್ಟುವ ಮಗುವು ಆ ಕುಟುಂಬದೊಂದಿಗೆ ಮಾತ್ರವಲ್ಲದೆ ಅದರ ಬಂಧು ಬಳಗದೊಂದಿಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳುತ್ತದೆ. ಈ ಸಂಬಂಧ ಮತ್ತು 'ರಕ್ತಸಂಬಂಧ' ಎಂದು ಕರೆಯಬಹುದು. ಇಲ್ಲಿ ಹುಟ್ಟಿದ ಮಗು ತಂದೆಯ ಜಗಳದೊಂದಿಗೆ ಮಾತ್ರವಲ್ಲದೆ ತಾಯಿಯ ಜಗಳದೊಂದಿಗೂ ಸಂಬಂದ ಪಡೆಯುತ್ತದೆ. ತನ್ನ ತಂದೆಯನ್ನು ಅಪ್ಪ, ಅಣ್ಣ, ಅಪ್ಪಾಜಿ, ಪಪ್ಪ ಎಂದು ಕರೆಯುತ್ತದೆ. ಇತ್ತೀಚೆಗೆ ಆಂಗ್ಲ ವ್ಯಾಮೋಹ ಜಾಸ್ತಿಯಾಗಿರುವುದಿರಂದ ಅನುಕರುಣೆಯ ಮೂಲಕ 'ಡ್ಯಾಡಿ' ಎಂದು ಸಂಭೋದಿಸುತ್ತದೆ. ಹಾಗೆಯೇ ತಾಯಿಯನ್ನು ಅಮ್ಮ, ಅವ್ವ, ಅಕ್ಕ, ಎಂದೂ ಆಂಗ್ಲ ಭಾಷಾ ಪ್ರಭಾವದಿಂದ "ಮಮ್ಮೀ" ಎಂದೂ ಕರೆಯುತ್ತಿದೆ. ತನ್ನ ಹಿರಿಯ ಸಹೋದರರನ್ನು 'ಅಣ್ಣ' ಅಣ್ಣಯ್ಯ, ಅಣ್ಣಾಜಿ ಎಂದೂ ಕಿರಿಯ ಸಹೋದರರನ್ನು ತಮ್ಮ, ತಮ್ಮಯ್ಯ ಎಂತಲೂ ಕರೆಯುತ್ತಾರೆ. ಹಿರಿಯ ಸಹೋದರಿಯನ್ನು ಅಕ್ಕ, ಅಕ್ಕಯ್ಯ ಎಂತಲೂ ಕಿರಯ ಸಹೋದರಿಯನ್ನು ತಂಗಿ, ತಂಗ್ಯಮ್ಮ ಎಂದೂ ಸಂಭೋಧಿಸಲಾಗುತ್ತದೆ.

ಮಗುವಿನ ತಂದೆಯ ತಂದೆ ಅಜ್ಜ, ಅಯ್ಯ, ಎನಿಸಿಕೊಂಡರೆ ತಾಯಿ- ಅಮ್ಮ ಅಜ್ಜಿ ಎನಿಸಿಕೊಳ್ಳುತ್ತಾರೆ, ಹಾಗೆಯೇ ತಾಯಿಯ ಸಹೋದರರು ದೊಡ್ಡಪ್ಪ, ಚಿಕ್ಕಪ್ಪ ಅವರ ಹೆಂಡತಿಯವರು ದೊಡ್ಡಮ್ಮ-ಚಿಕ್ಕಮ್ಮ, ಹಾಗೆಯೇ ಅವರ ಮಕ್ಕಳು ಅಣ್ಣ-ತಮ್ಮ, ಅಕ್ಕ-ತಂಗಿ ಎನಿಸಿಕೊಳ್ಳುತ್ತಾರೆ. ತಂದೆಯ ಸಹೋದರಿಯರು'ಅತ್ತೆ' ಎನಿಸಿಕೊಂಡು ಅವರ ಗಂಡ ಮಾವಂದಿರಾಗುತ್ತಾರೆ. ಅವರ ಮಕ್ಕಳು ಭಾವ ಮೈದುನ ಸಂಬಂಧವನ್ನು ಪಡೆದುಕೊಳ್ಳುತ್ತಾರೆ. ಹೀಗೆ ಮಗು ವ್ಯಪಕವಾದ ಸಂಬಂಧವನ್ನು ಪಡೆಯುವುದು ಸುಲಭವಾಗಿ ಬೇರೆ ಶಬ್ದಗಳಿಂದ ಸಂಬಂಧವನ್ನು ಗುರುತಿಸುತ್ತದೆ. ಆದರೆ ಇತ್ತೀಚೆಗೆ ಆಧುನಿಕತೆಯ ಮೋಹದಿಂದ ಸಂಬಂಧವನ್ನು ಸೂಚಿಸುವ ಶಬ್ದಗಳು ಕಣ್ಮರೆಯಾಗತೊಡಗಿವೆ. ತಂದೆ ತಾಯಿ, ಡ್ಯಾಡಿ-ಮಮ್ಮಿಗಳಾದರೆ ಇನ್ನಿತರೆ ಎಲ್ಲ ಸಂಬಂಧಗಳನ್ನು ಆಂಟಿ- ಅಂಕಲ್ ಗಳಾಗುತ್ತಾರೆ. ಇದೊಂದು ದುರಂತವೇ ಸರಿ ಇವುಗಳನ್ನು ನಿಯಂತ್ರಿಸುವಲ್ಲಿ ವಿದ್ಯಾವಂತರು ಈಗಲೇ ಪ್ರಯತ್ನಿಸಬೇಕಾಗಿದೆ. ಆದರೆ ಆ ವಿದ್ಯಾವಂತರೆ ಈ ಪದಗಳಿಗೆ ಮಾರುಹೋಗುತ್ತಿರುವುದು ದುರಂತವೇ ಸರಿ.

**ಆಸ್ತಿ ಹಂಚಿಕೆ:** ಕಬ್ಬತ್ತಿ ಗ್ರಾಮದಲ್ಲಿ ಬ್ರಾಹ್ಮಣ, ಒಕ್ಕಲಿಗ, ಹರಿಜನ, ಕ್ಷೌರಿಕ, ಮಡಿವಾಳ ಜಾತಿಗಳ ಬಹುಪಾಲು ಜನರಿಗೆ ಆಸ್ತಿ ಇದೆ. ಗ್ರಾಮಕ್ಕೆ ಸಂಬಂಧಪಟ್ಟ ಆಸ್ತಿಯೆಲ್ಲವೂ ಹೆಚ್ಚು ಖುಷ್ಕಿಯದಾಗಿದೆ. ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಕೆರೆಯ ನೀರನ್ನ

ಆಶ್ರಯಿಸಿರುವಂತಹ ತರಿ ಜಮೀನಿದೆ. ವಾಣಿಜ್ಯ ಉದ್ದೇಶಕ್ಕೆ ಬಳಸುವಂತಹ ಜಮೀನು ಇಲ್ಲ. ಆದರೂ ಸಹ ಜಮೀನಿಗೆ ಒಳ್ಳೆಯ ಆರ್ಥಿಕ ಮೌಲ್ಯವನ್ನು ಹೊಂದಿದೆ. ಆಸ್ತಿಗಳಲ್ಲಿ ಸ್ವಯಾರ್ಜಿತ ಮತ್ತು ಪಿತ್ರಾರ್ಜಿತ ಎಂದು ಎರಡು ಬಗೆಯಿದೆ. ಪರಂಪರಾಗತವಾಗಿ ಬಂದದ್ದು, ಪಿತ್ರಾರ್ಜಿತವಾದರೆ, ಸ್ವತಃ ಸಂಪಾದನೆ ಮಾಡಿದುದು. ಸ್ವಯಾರ್ಜಿತ ಎನಿಸಿಕೊಳ್ಳುತ್ತದೆ. ಈ ಎರಡು ರೀತಿಯ ಆಸ್ತಿಗಳು ಈ ಗ್ರಾಮದಲ್ಲಿದೆ. ಪಿತ್ರಾರ್ಜಿತದಲ್ಲಿ ತನ್ನ ಪೀಳಿಗೆಗೆ ಆಸ್ತಿ ರವಾನಿಸಬೇಕಾಗಿರುತ್ತದೆ. ಸ್ವಯಾರ್ಜಿತ ಆಸ್ತಿಯನ್ನು ತನ್ನ ಇಚ್ಛೆಯುಳ್ಳವರಿಗೆ ಮಾರುವ, ಉಚಿತವಾಗಿ ನೀಡುವ ಹಕ್ಕು ಆ ಮಾಲೀಕನಿಗಿರುತ್ತದೆ. ಇಲ್ಲಿ ಜಮೀನು, ಮನೆ ಇತ್ಯಾದಿಗಳನ್ನು ತಮ್ಮ ಗಂಡುಮಕ್ಕಳಿಗೆ ಹಂಚುವ ವ್ಯವಸ್ಥೆ ಇದೆ. ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕು ಇದೆಯಾದರೂ ಹೆಣ್ಣು ಮಕ್ಕಳಿಗೆ ಸಮನಾಗಿ ಆಸ್ತಿ ಹಂಚುವ ವ್ಯವಸ್ಥೆ ಇನ್ನು ಆಗಿಲ್ಲ. ಒಂದು ವೇಳೆ ಮದುವೆಯಾಗಿ ಬೇರೆ ಮನೆಗೆ ಹೋದ ಹೆಣ್ಣುಮಕ್ಕಳು ತಮಗೂ ಸಮಾನ ಆಸ್ತಿ ನೀಡುವಂತೆ ತವರಿನವರನ್ನು ಒತ್ತಾಯಿಸಿದಾಗ ಪರಸ್ಪರ ಜಗಳಗಳಾದ ಪ್ರಸಂಗಗಳುಂಟು. ಇವು ಮುಂದೆ ಹೆಣ್ಣು ಮಕ್ಕಳು ಮತ್ತು ತೌರಿನ ನಡುವಿನ ಸುಮಧುರ ಸಂಬಂಧ ಕದಡಿದ ಉದಾಹರಣೆಗಳಿವೆ. ಈ ಕಾರಣದಿಂದ ಹೆಣ್ಣು ಮಕ್ಕಳು ಆಸ್ತಿಯ ಹಕ್ಕನ್ನು ಕೇಳುವುದಕ್ಕೆ ಇಷ್ಟಪಡುವುದಿಲ್ಲ.

ಇತ್ತೀಚೆಗೆ ಆಸ್ತಿಯ ಮೇಲಿನ ವ್ಯಾಮೋಹ ಕಡಿಮೆಯಾಗಿದೆ. ಹೊಸ ಪೀಳಿಗೆ ಇವರ ಮೇಲಿನ ಆಸೆ ಬಿಟ್ಟು ಚೆನ್ನಾಗಿ ಓದಿ ನಗರದಲ್ಲಿ ನೌಕರಿ ಸಂಪಾದಿಸುವ, ವ್ಯವಹಾರ ನಡೆಸುವ ಉದ್ದೇಶ ಹೊಂದಿದೆ. ಇದರಿಂದಾಗಿ ಆಸ್ತಿಯ ಮೇಲಿನ ಹಕ್ಕನ್ನು ಸ್ಥಾಪಿಸುವ ಬದಲು ತಮ್ಮ ತಮ್ಮವರಿಗೆ ಬಿಟ್ಟುಕೊಡುವ ಪದ್ಧತಿಯು ಪ್ರಸ್ತುದಲ್ಲಿದೆ. ಹಾಗೆಯೇ ಮಕ್ಕಳು ಇಲ್ಲದ, ವಾರಸುದಾರರಿಲ್ಲದ ಆಸ್ತಿಯನ್ನು ಅವರ ಸಂಬಂಧಿಕರಿಗೆ ಬಿಟ್ಟು ಕೊಡಲಾಗುತ್ತದೆ. ಅಂತಹ ಸಂಬಂಧಿಕರು ವಾರಸುದಾರರು ಮರಣ ಹೊಂದಿದ ಸಂದರ್ಭದಲ್ಲಿ ಉತ್ತರಾಧಿಕ್ರಿಯೆಯನ್ನು ಮಾಡುತ್ತಾರೆ. ಕೆಲವು ಸಂದರ್ಭದಲ್ಲಿ ಅನಾಥ ಮಕ್ಕಳನ್ನು ಅಥವಾ ಸಂಬಂಧಿಕರ ಮಕ್ಕಳನ್ನೇ ದತ್ತು ತೆಗೆದುಕೊಂಡು ಆ ಮಕ್ಕಳಿಗೆ ಆಸ್ತಿಯನ್ನು ಬರೆಯುತ್ತಾರೆ. ಹಾಗೆಯೇ ವಾರಸುದಾರರಿಲ್ಲದ ಆಸ್ತಿಯನ್ನು ಗ್ರಾಮ ಪಂಚಾಯಿತಿ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡು ಅಂತಹ ಜಮೀನನ್ನು ಊರಿನ ಜಮೀನಾಗಿ ಇಟ್ಟುಕೊಂಡು ದೇವಾಲಯ ಪೂಜೆ ಮಾಡುವ ಅರ್ಚಕರಿಗೆ, ಜಮೀನು ಇಲ್ಲದ ಬಡವರಿಗೆ ಜಮೀನಿನ ನಿರ್ವಹಣೆಗಾಗಿ ಬಿಡುತ್ತಾರೆ. ಒಟ್ಟಾರೆಯಾಗಿ ಆಸ್ತಿ ಹಕ್ಕು ಪ್ರಾಚೀನ ಕಾಲದಂತೆ ವಂಶಪಾರಂಪರ್ಯವಾಗಿ ಗಂಡುಮಕ್ಕಳಿಗೆ ಬರುತ್ತದೆ.

ಹೀಗೆ ಸಾಮಾಜಿಕವಾಗಿ ಕಬ್ಬತ್ತಿ ಗ್ರಾಮವನ್ನು ಸಮೀಕ್ಷಿಸಿದಾಗ ವಿವಿಧ ಜಾತಿಯರು ಇದ್ದರೂ ಸಹ ಶಾಂತಿಯ ಸಹಬಾಳ್ವೆ ಅವರದ್ದಾಗಿದ್ದು ಸಾಮಾಜಿಕ ಭೇದ ಉಂಟಾಗಿಲ್ಲ. ಬ್ರಾಹ್ಮಣರಲ್ಲೂ ಒಟ್ಟಾರೆ ಜಾತಿಯ ಕಟ್ಟುಪಾಡು ಕಡಿಮೆಯಾಗಿದೆ. ಒಟ್ಟಿನಲ್ಲಿ ಕಬ್ಬತ್ತಿ ಗ್ರಾಮದ ಸಾಮಾಜಿಕ ವ್ಯವಸ್ಥೆ ವೈಶಿಷ್ಟ್ಯಪೂರ್ಣವಾಗಿದೆ ಎಂದು ಹೇಳಬಹುದು

## ಅಧ್ಯಾಯ – ೪

## ಧಾರ್ಮಿಕ ವ್ಯವಸ್ಥೆ

ಧರ್ಮ ಎಂದ ಕೂಡಲೇ ಅದರ ಪರಿಕಲ್ಪನೆ ಮನದಲ್ಲಿ ಮೂಡುವುದಾದರೂ ಅದನ್ನು ಖಚಿತವಾದ ಶಬ್ದಗಳಲ್ಲಿ ನಿಖರವಾಗಿ ಹಿಡಿದಿಡುವುದು ಸಾಧ್ಯವಾಗುವುದಿಲ್ಲ. ಧರ್ಮ ದೇವರುಗಳ ಬಗೆಗೆ ಪ್ರಥಮ ಕಲ್ಪನೆ ಮೂಡಿಸಿಕೊಂಡ ಆದಿ ಮಾನವನಲ್ಲಿದ್ದ ನಂಬಿಕೆ ಮತ್ತು ಗೊಂದಲಗಳನ್ನೇ ಇಂದಿನ ಸಮಾಜದಲ್ಲೂ ಕಾಣಬಹುದಾಗಿದೆ. ಈ ಕಾರಣದಿಂದಲೇ ಧರ್ಮದ ಉಗಮ ಮತ್ತು ವಿಕಾಸಗಳನ್ನು ಕುರಿತಂತೆ ಹಲವು ರೀತಿಯ ತರ್ಕ, ಮೀಮಾಂಸೆ, ವ್ಯಾಖ್ಯಾನಗಳು ಸಿದ್ಧಗೊಳ್ಳುತ್ತಿದ್ದರೂ ಅವು ಯಾವುವೂ ಧರ್ಮದ ಒಟ್ಟು ಸ್ವರೂಪವನ್ನು ಅನಾವರಣಗೊಳಿಸಲು ಯಶಸ್ವಿಯಾಗಿಲ್ಲ. ತನಗಿಂತಲೂ ಮಿಗಿಲಾದ ಶಕ್ತಿಯೊಂದು ತನ್ನನ್ನು ನಿಯಂತ್ರಿಸುತ್ತದೆ ಎಂಬುದನ್ನು ಅನುಭವಗಳ ಮೂಲಕ ಅರಿತುಕೊಂಡ ಆದಿಮಾನವ ಅನಂತರವೂ ಅದೇ ಅನುಭವಗಳ ಒತ್ತಾಸೆಯಿಂದ ವಿವಿಧ ರೀತಿಯ ಧಾರ್ಮಿಕ ಪರಿಭಾವನೆಗಳನ್ನು ಬೆಳೆಸಿಕೊಂಡ. ಈ ಪರಿಭಾವನೆಗಳು ಬೆಳೆದು ಬಂದಿರುವ ಸಾಧ್ಯತೆಗಳನ್ನು ಸರ್ವಚೇತನವಾದ ಪ್ರಕೃತಿವಾದ, ಶಕ್ತಿವಾದ, ಬಹುದೇವತಾವಾದ ಮತ್ತು ಏಕದೇವತಾವಾದಗಳಂತಹ ಪರಿಕಲ್ಪನೆಗಳು ವಿವರಿಸಲು ಯತ್ನಿಸಿವೆ. ಒಟ್ಟಿನಲ್ಲಿ ಸರಳ ಮನೋಭಾವದ ಆದಿ ಮಾನವನಲ್ಲಿ ತನ್ನ ಗಮನಕ್ಕೆ ಬಂದ ಕಲ್ಪನೆಗೆ ಎಟುಕಿದ ವಸ್ತುಗಳೆಲ್ಲವಕ್ಕೆ ದೈವತ್ವವನ್ನು ಆರೋಪಿಸುವ ಉತ್ಸಾಹ ಇದ್ದರೆ ಅದೇ ಮನಸ್ಸು ಬೆಳೆದು ತಾರ್ಕಿಕ ಶಕ್ತಿಯನ್ನು ಗಳಿಸಿಕೊಂಡಾಗ ಸಂಕೀರ್ಣ ಸ್ವರೂಪದ ಏಕದೇವತೆಗೆ ನಿಷ್ಠೆ ತೋರಿಸುವ ಗಟ್ಟಿತನವನ್ನು ಪಡೆದುಕೊಳ್ಳುವುದನ್ನು ಕಾಣಬಹುದು. ಹೀಗೆ ವಿವಿಧ ರೀತಿಯಲ್ಲಿ ದೇವಾಲಯಗಳನ್ನು ಗುರುತಿಸುವ ಪಂಥಗಳೇ ಮುಂದೆ ವಿವಿಧ ರೀತಿಯಲ್ಲಿ ದೇವರುಗಳನ್ನು ಗುರುತಿಸುವ ಪಂಥಗಳಾಗಿ ಮುಂದೆ ವಿವಿಧ ಧರ್ಮಗಳಾಗಿ ರೂಪುತಳೆದವು.

ಕಬ್ಬತ್ತಿ ಗ್ರಾಮದಲ್ಲಿ ಹಿಂದೂಧರ್ಮದ ಆಸರೆಯಲ್ಲೇ ರೂಪುಗೊಂಡಿರುವ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಪಂಥಗಳ ವೈದಿಕ ಧರ್ಮ ಮತ್ತು ಜನರ ಬದುಕಿನಲ್ಲಿ ಒಂದಾಗಿ ಅವರಿಂದಲೇ ಬೆಳೆದು ಬಂದ ಜನಪದ ಧರ್ಮ ಇಲ್ಲಿ ಇವುಗಳನ್ನು ಪ್ರಧಾನವಾಗಿ ಕಾಣಬಹುದಾಗಿದೆ. ಈ ಎರಡು ಅಂದರೆ ವೈದಿಕ ಮತ್ತು ಜನಪದದ ಧರ್ಮಗಳು ದೇವರ ನಂಬಿಕೆಯ ಅಡಿಪಾಯದ ಮೇಲೆಯೇ ನಿಂತಿರುವುದು ಗಮನಾರ್ಹವಾದ ಅಂಶ. ದೇವರನ್ನು ಪರಿಭಾವಿಸುವ ಮತ್ತು ಅರ್ಥೈಸುವ ರೀತಿಯಲ್ಲಿ ಮಾತ್ರ ಇವು ಒಂದರಿಂದ ಒಂದು ಭಿನ್ನವಾಗುತ್ತದೆ. ಮಾನವನ ನೈತಿಕ ಜೀವನಕ್ಕೆ ಒತ್ತುಕೊಟ್ಟು ಅವನ ಆಂತರಿಕ ಅನಿಸಿಕೆಗಳನ್ನು, ನಂಬಿಕೆಗಳನ್ನು ಸಂಯೋಜಿಸಿ

ಸಮಾಜಿಕ ಬದುಕಿಗೆ ವಿಶಿಷ್ಟತೆ ಒದಗಿಸುವಲ್ಲಿ ಮಾನವನ ಬದುಕಿನಲ್ಲಿ ನಂಬಿಕೆ, ಶ್ರದ್ಧೆ, ಆಶಾಪೂರ್ಣ ಭಾವನೆಗಳನು ಬೆಳೆಸುವಲ್ಲಿ ಈ ಧರ್ಮ ಮಹತ್ವದ ಪಾತ್ರವನ್ನು ವಹಿಸುತ್ತದೆ. ಆದುದರಿಂದಲೇ ಮಾನವನಿಗೂ ಕೂಡ ಧರ್ಮವನ್ನು ಬಿಟ್ಟು ಜೀವಿಸುವುದು ಅಸಾಧ್ಯ. ಹೀಗಾಗಿ ಹುಟ್ಟಿನಿಂದ ಬಂದ ಅಥವಾ ತನಗೆ ಸರಿ ಅನ್ನಿಸುವ ಧರ್ಮವನ್ನು ತನ್ನದೆಂದು ಒಪ್ಪಿಕೊಂಡು ಅದನ್ನು ಅನುಸರಿಸುತ್ತಾ ಬಂದಿದ್ದಾನೆ.

ಕ್ವಚಿತ್ತಾಗಿ ಕೆಲವು ಕಡೆಗಳಲ್ಲಿ ಒಂದೇ ಧರ್ಮಗಳನ್ನು ಆಚರಿಸುವ ಜನ ನೆಲೆ ನಿಂತಿರುತ್ತಾದರೂ ಬಹುಪಾಲು ಊರುಗಳಲ್ಲಿ ವಿವಿಧ ಧರ್ಮದ ಜನ ಒಂದೆಡೆ ಕಲೆತಿರುತ್ತಾರೆ. ಈ ಸೌಹಾರ್ದತೆಯಿಂದಲೇ ವಿವಿಧತೆಯಲ್ಲಿ ಏಕತೆಯನ್ನು ಕಂಡುಕೊಳ್ಳುವುದು ಸಾಧ್ಯವಾಗುತ್ತದೆ. ಕಬ್ಬತ್ತಿ ಗ್ರಾಮದಲ್ಲಿ ವೈದಿಕ ಮತ್ತು ಜನಪದ ಧರ್ಮಗಳ ಜನ ಒಂದೆಡೆ ಕಲೆತು ಊರನ್ನು ಸಹಬಾಳ್ವೆಯ ಕೇಂದ್ರವನ್ನಾಗಿ ಮಾಡಿದ್ದಾರೆ ಎಂಬುದು ಈ ವಿವಿಧ ಧರ್ಮಗಳ ಜನರನ್ನು ಪೋಣಿಸುವ ದಾರವಾಗಿ ಶ್ರೀರಂಗನಾಥಸ್ವಾಮಿ ಕಾರ್ಯ ತತ್ಪರವಾಗಿದೆ ಎಂಬುದು ಗಮನಾರ್ಹ ಅಂಶ.

**ಕಬ್ಬತ್ತಿ ಗ್ರಾಮದಲ್ಲಿರುವ ಧರ್ಮಗಳು**

ಒಂದು ಊರು ಪರಿಪೂರ್ಣವಾದ ಸ್ವಾವಲಂಬನೆ ಪಡೆದು ಸಂಸ್ಕೃತಿಯ ಸಂವಹನ ಮಾಧ್ಯಮವಾಗಿ ಬೆಳೆಯಬೇಕಾದರೆ ಆ ಊರಿನ ಸಮಸ್ತರ ಪರಸ್ಪರ ಸಹಕಾರ ಮತ್ತು ಹೊಂದಾಣಿಕೆಗಳು ಅಗತ್ಯ ಎನಿಸುತ್ತವೆ.

ಕಬ್ಬತ್ತಿ ಗ್ರಾಮವು ಪುಟ್ಟ ಗ್ರಾಮವಾಗಿದ್ದುದು ಈಗ ಎಲ್ಲಾ ರೀತಿಯ ಆಧುನಿಕ ಸೌಲಭ್ಯಗಳನ್ನು ಹೊಂದಿರುವ ಮಾದರಿ ಗ್ರಾಮವಾಗಿ ರೂಪುಗೊಂಡಿದೆ. ವೈದಿಕರ ಜತೆ ಜನಪದ ಧರ್ಮದ ಜೀವನಾಡಿಯನ್ನು ಮಿಡಿಸುತ್ತಿರುವ ಒಕ್ಕಲಿಗರು, ಕ್ಷೌರಿಕರು, ಮಡಿವಾಳರು, ಪರಿಶಿಷ್ಟ ಜಾತಿಯವರು ಮೊದಲುಗೊಂಡಂತೆ ವಿವಿಧ ಜಾತಿಗಳಿಗೆ ಸೇರಿದ ವಿವಿಧ ಭಾವಗಳ ಜನರು ಇಲ್ಲಿ ಸಂಗಮವಾಗಿ ಊರಿನ ಒಟ್ಟು ಅಭಿವೃದಿಗೆ ಕಾರಣರಾಗಿದ್ದಾರೆ. ಮತ್ತು ವಿವಿಧ ಧರ್ಮಿಯರ ಬಗೆಗಿನ ಸ್ಥೂಲ ಅವಲೋಕನವನ್ನೂ ಇಲ್ಲಿ ಕಾಣಬಹುದು.

**ಜನಪದ ಧರ್ಮ.**

ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ ತೊಂಬತ್ತಪ್ಪಿರುವ ಜನಪದರು ಹಿಂದೂ ಧರ್ಮದ ಚೌಕಟ್ಟಿನಲ್ಲಿದ್ದೂ ವೈದಿಕ ಧರ್ಮದತ್ತ ಭಯಮಿಶ್ರಿತ ಗೌರವದಿಂದ ದೂರದಿಂದಲೇ ಕೈಮುಗಿದು ತಮಗೆ ಪರಂಪರೆಯಿಂದ ರಕ್ತಗತವಾಗಿ ಬಂದಿರುವ 'ಧರ್ಮ'ಕ್ಕೆ ನಿಷ್ಠೆ ತೋರುತ್ತಾರೆ. ಮನೆದೇವರು, ಕುಲದೇವರು, ಒಕ್ಕಲುದೇವರು ಎಂದು ಬಿನ್ನ ಭಿನ್ನ ದೈವಗಳನ್ನು ಒಮ್ಮತದಿಂದಲೇ ಆರಾಧಿಸುವ ಇವರು ತಾವು ನಂಬಿದ ದೈವ

ಕೈ ಬಿಟ್ಟಿತೆನಿಸಿದ ಕೂಡಲೇ ಮತ್ತೊಂದು ದೈವಕ್ಕೆ ಶರಣು ಹೊಗುತ್ತಾರೆ. ಇಲ್ಲವೇ ಈ ದೈವವನ್ನೇ ಬಾಯಿಗೆ ಬಂದಂತೆ ನಿಂದಿಸಿ ಇದರಿಂದಲೇ ತಮ್ಮ ಕೆಲಸ ಸಾಧಿಸಿಕೊಳ್ಳಲು ಯತ್ನಿಸುತ್ತಾರೆ. ತಮ್ಮ ದೈವವನ್ನು ಬಿಡಲಾಗದೆ ಮತ್ತೊಂದು ದೈವದ ಮೇಲಿನ ಅಭಿಮಾನವನ್ನು ಹತ್ತಿಕ್ಕಲಾಗದೇ ಆ ದೈವಕ್ಕೆ ಕಳ್ಳೊಕ್ಕಲಾಗಿ ನುಸುಳುವ ಅವಕಾಶವೂ ಇವರಿಗಿದೆ.

ಕಬ್ಬತ್ತಿ ಗ್ರಾಮದಲ್ಲಿರುವ ಜನಪದರಲ್ಲಿ ಈ ಎಲ್ಲ ಸಾಮಾನ್ಯ ಲಕ್ಷಣಗಳಿವೆ. ಒಕ್ಕಲಿಗ, ಮಡಿವಾಳ, ಕ್ಷೌರಿಕ, ಬೆಸ್ತ, ಹೊಲೆಯ, ಮಾದಿಗ ಮುಂತಾದ ಜಾತಿಗಳಿಗೆ ಸೇರಿರುವ ಇವರಿಗೆ ಸ್ಥಳೀಯ ದೈವ ಶ್ರೀ ರಂಗನಾಥ ಸ್ವಾಮಿಯ ಒಕ್ಕಲಾಗಿದ್ದಾರೆ. ಉಳಿದವರು ನಂಜನಗೂಡು ನಂಜುಂಡೇಶ್ವರ, ಆದಿ ಚುಂಚನಗಿರಿ, ಭೈರವೇಶ್ವರ, ವೆಂಕಟರಮಣ ಮೊದಲಾದ ಹತ್ತಿರದ ಅಥವಾ ದೂರದ ದೈವಗಳಿಗೆ ನಡೆದುಕೊಳ್ಳುತ್ತಾರೆ.

ಆಗಮಗಳು ಶಿವ-ವಿಷ್ಣು ಇವರ ನಡುವಣ ಭೇದವನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ತೆರೆದಿಟ್ಟವೆ. ಆದರೆ ಇವರಲ್ಲಿ ಆ ಭೇದಭಾವವೇ ಇಲ್ಲ. ಇವರ ಶುದ್ಧ ಚಿತ್ರಕ್ಕೆ ಶ್ರೀರಂಗನಾಥಸ್ವಾಮಿ, ನಂಜುಂಡೇಶ್ವರ ಇಬ್ಬರೂ ಬೇಕು. ಅಂತೆಯೇ ಸೋಮವಾರ ನಂಜುಂಡೇಶ್ವರ, ಮಂಗಳವಾರ ವೀರಭದ್ರ, ಗ್ರಾಮದೇವತೆಗಳು, ಬುದವಾರ-ಶನಿವಾರ ಶ್ರೀರಂಗನಾಥಸ್ವಾಮಿ ಮತ್ತು ಶನೇಶ್ವರ, ಗುರುವಾರ ರಾಘವೇಂದ್ರ, ಸುಕ್ರವಾರ ಸ್ತ್ರೀದೇವತೆಗಳು, ಶನಿವಾರ ವೆಂಕಟರಮಣ ಹಾಗೂ ಶ್ರೀರಂಗನಾಥಸ್ವಾಮಿ, ಭಾನುವಾರ ಸುಬ್ರಹ್ಮಣ್ಯ, ನಾಗಪ್ಪ ಹೀಗೆ ವಾರದ ಎಲ್ಲಾ ದಿನಗಳಲ್ಲೂ ಇವರ ವಿವಿಧ ದೈವಗಳಿಗೆ ಮೀಸಲಾಗಿರುತ್ತದೆ. ತಮ್ಮ ಕಷ್ಟ ನಿವಾರಿಸುವ ಯಾವ ದೈವವೇ ಆಗಲಿ ಅದಕ್ಕೆ ಹರಕೆ ಸೇವೆ ಸಲ್ಲಿಸಲು ಇವರು ಸದಾ ಸಿದ್ಧರಾಗಿರುತ್ತಾರೆ. ಹಾಗಾಗಿ ಇವರ ದೈವಗಳ ಸಂಖ್ಯೆಯೂ ಅಪಾರವಾಗಿರುತ್ತದೆ.

**ವೈದಿಕ ಧರ್ಮ:** ಕಬ್ಬತ್ತಿ ಗ್ರಾಮದಲ್ಲಿ ವೈದಿಕ ಧರ್ಮ ಅಲ್ಪ ಪ್ರಮಾಣದಲ್ಲಿದ್ದು ಜನಪದ ಧರ್ಮವೇ ಪ್ರಧಾವಾಗಿದೆ. ವೈದಿಕರು ಹೆಚ್ಚಿನ ವಿದ್ಯಾಭ್ಯಾಸ ಪಡೆದಂತೆಲ್ಲಾ ನಗರ ಪ್ರದೇಶಗಳಿಗೆ ಪಲಾಯನ ಮಾಡಿದರ ಫಲವಾಗಿ ಹಾಗೂ ಸರ್ಕಾರಿ ಖಾಸಾಗಿ ಸೇವೆಗಳ ನಿಮಿತ್ತ ಪಟ್ಟಣಗಳಿಗೆ ವಲಸೆ ಹೋದಂತಾಗ ಪರಿಣಾಮವಾಗಿ ಇಂದು ಇವರು ಅಲ್ಪ ಸಂಖ್ಯಾತರಾಗಿ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಪ್ರಸ್ತುತ ಇವರ ಮನೆಗಳು ಹತ್ತಿರಿಂದ ಹದಿನೈದು ಮನೆಗಳಿದ್ದು, ನೂರಕ್ಕೂ ಕಡಿಮೆ ಜನಸಂಖ್ಯೆ ಹೊಂದಿದೆ. ಇವರ ಪ್ರಮಾಣ ಈಗಿನ ಜನಸಂಖ್ಯೆಗೆ ಕಡಿಮೆ ಎನ್ನಿಸಿದರೂ ಕಬ್ಬತ್ತಿ ಗ್ರಾಮದ ಧಾರ್ಮಿಕ ಇತಿಹಾಸದ ನಿರ್ಮಾಣದಲ್ಲಿ ಇವರ ಪಾತ್ರ ಗೌಣವೇನೂ ಅಲ್ಲ. ವೈದಿಕ ಧರ್ಮದ ಸ್ಮಾರ್ತ, ಶ್ರೀವೈಷ್ಣವ ಪಂಥದ ಅನುಯಾಯಿಗಳು ಈ ಗ್ರಾಮದಲ್ಲಿ ಪ್ರಧಾನವಾಗಿ ಇರುವುದನ್ನು ಕಾಣಬಹುದು.

ಕಬ್ಬತ್ತಿ ಗ್ರಾಮದಲ್ಲಿ ಅಯ್ಯಂಗಾರರು ಎಂದು ಗುರುತಿಸಿಕೊಳ್ಳುವ ಶ್ರೀ ವೈಷ್ಣವರು ಶ್ರೀ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಪಂಥವನ್ನು ಅಳವಡಿಸಿಕೊಂಡವರು. ಊರಿನ ದೈವವಾದ ಶ್ರೀರಂಗನಾಥ ಸ್ವಾಮಿಯ ಪೂಜೆ, ನೈವೇದ್ಯಗಳನ್ನು ನಡೆಸುವವರು ಇವರುಗಳೇ ಆಗಿದ್ದಾರೆ. ಸ್ಮಾರ್ತರು ಶಂಕರಾಚಾರ್ಯರ ಅನುಯಾಯಿಗಳಾಗಿದ್ದು, ಈಶ್ವರನನ್ನು ಅದ್ವೈತ ಭಾವದಿಂದ ಆರಾಧಿಸುವವರಾಗಿದ್ದಾರೆ.

ಬ್ರಾಹ್ಮಣರು ಪರಂಪರಾಗತ ವೈದಿಕ ಮೌಲ್ಯಗಳಿಗೆ ತೀವ್ರವಾದ ಒತ್ತನ್ನು ಕೊಟ್ಟು ಬಾಳುತ್ತಿರುವವರಾದರೂ ಸ್ಥಳೀಯ ಜನಪದ ಧರ್ಮವನ್ನು ನಿರ್ಲಕ್ಷಿಸುವುದು ಇವರಿಗೆ ಸಾಧ್ಯವಿಲ್ಲ. ತಮ್ಮ ಜೀವನಾವಶ್ಯಕ ವಸ್ತುಗಳಿಗೆ ಸಂಪೂರ್ಣವಾಗಿ ಜನಪದರನ್ನೇ ಅವಲಂಭಿಸಬೇಕಾಗಿರುವುದರಿಂದ ವೈದಿಕ ಗತ್ತಿನೊಡನೆ ಸೌಹಾರ್ದತೆಯನ್ನು ಬೆಳಸಿಕೊಳ್ಳುವುದು ಇವರಿಗೆ ಅನಿವಾರ್ಯವಾಗಿದೆ. ಹುಟ್ಟು, ಮದುವೆ, ಸಾವು ಮುಂತಾದ ಸಂದರ್ಭಗಳ ಜೊತೆಗೆ ಮನೆ ಕಟ್ಟುವುದು, ವ್ಯಾಪಾರ ಮಾಡುವುದು ಮುಂತಾದ ವ್ಯವಹಾರಿಕಕಾರ್ಯಗಳಲ್ಲೂ ಹೊತ್ತಿಗೆ ನೋಡುವ ಜ್ಯೋತಿಷ್ಯ ಹೇಳುವ ಜವಾಬ್ದಾರಿ ಇವರದು.

ಬ್ರಾಹ್ಮಣರ ಮಧುರ ಶೈಲಿಗೆ ಮರುಳಾದ ಜನಪದರು 'ಹಾರುವವ ಮಾತು ಚಂದ' ಎಂದು ತಿಳಿದುಕೊಳ್ಳುವರು. ಹಾಗೆಯೇ ಬ್ರಾಹ್ಮಣರನ್ನು ದೂಷಿಸಬಾರದು, ಅವರು ಹಸಿದಿರುವಂತೆ ಮಾಡಬಾರದು ಎಂಬ ನಂಬಿಕೆಗಳೊಂದಿಗೆ ಬ್ರಾಹ್ಮಣ ಹತ್ಯೆ ಮಾಡಿದರೆ ಬ್ರಹ್ಮಹತ್ಯೆಗಿಂತ ಘೋರವಾದ ಪಾಪ ಮಾಡಿದಂತಾಗುತ್ತದೆ ಎಂಬ ಎಚ್ಚರಿಕೆ ಇಂದಿಗೂ ಇದೆ. 'ಭೋಜನ ಅಂದ್ರೆ ಯೋಜನೆ ಹೋಗ್ತಾರೆ', 'ಯಕಳ್ತೀ ಬ್ರಾಹ್ಮಣ ಅಂದ್ರೆ ಮುಂದರೆ ಬರೋ ಏಕಾದಶಿಗೆ' ಎಂಬ ಗಾದೆಗಳಾಗಿವೆ. ಈ ರೀತಿಯ ಲಘುಹಾಸ್ಯ ಜಾನಪದರ ಪರಿಧಿಯಿಂದ ಯಾರೂ ಯಾವುದೂ ಹೊರತಾಗುವುದಿಲ್ಲ ಎಂಬುದಕ್ಕೆ ನಿದರ್ಶನವಾಗಿದೆ.

**ಕಬ್ಬತ್ತಿ ಗ್ರಾಮದ ದೇವಾಲಯಗಳು**

ಕಬ್ಬತ್ತಿ ಗ್ರಾಮದಲ್ಲಿನ ಅಧಿದೇವತೆ ಶ್ರೀರಂಗನಾಥಸ್ವಾಮಿ. ಈ ದೇವಾಲಯದ ಪರಂಪರೆ ಮತ್ತು ಇತಿಹಾಸಗಳು ಭವ್ಯರೀತಿಯಲ್ಲಿ ಬೆಳೆದು ಬಂದಿವೆ. ಶ್ರೀರಂಗನಾಥಸ್ವಾಮಿ ಜನಪದ ದೇವತೆಯಾಗಿ ರೂಪುಗೊಂಡು ಆಗಮಿಕ ಮಹತ್ವ ಪಡೆದು ಶಿಷ್ಟ ದೇವತೆಯಾಗಿ ಬೆಳೆದಿರುವುದು ಕುತೂಹಲಕರವಾದ ವಿಚಾರ. ಇದರ ಜತೆಗೆ ಇನ್ನಿತರ ದೇವಾಲಯಗಳೂ ಗ್ರಾಮೀಣ ಮನಸ್ಸಿನ ವೈವಿಧ್ಯತೆಗಳಿಗನುಗುಣವಾಗಿ ಬೆಳೆದು ಬಂದಿರುವುದು ಗಮನಾರ್ಹವಾದ ಅಂಶ.

ಈ ಗ್ರಾಮದಲ್ಲಿ ಬೆಟ್ಟದ ಮೇಲಿರುವ ರಂಗನಾಥಸ್ವಾಮಿ, ಊರೊಳಗಿರುವ ಉತ್ಸವ ಮೂರ್ತಿ ರಂಗನಾಥಸ್ವಾಮಿ, ಭೂತಪ್ಪದೇವಾಲಯ, ಗುಡಿಸಲಮ್ಮ, ಲಕ್ಷ್ಮೀದೇವಿ, ಆಂಜನೇಯಸ್ವಾಮಿ ದೇವಾಲಯ, ಗ್ರಾಮದೇವತೆ, ದೇವಾಲಯ ಭೈರವೇಶ್ವರ ದೇವಾಲಯ ಈಶ್ವರ ದೇವಾಲಯಗಳು ಈ ಗ್ರಾಮದಲ್ಲಿರುವ ಇನ್ನಿತರ ದೇವಾಲಯಗಳು.

**ಉತ್ಸವಮೂರ್ತಿ ರಂಗನಾಥಸ್ವಾಮಿ**

ಗ್ರಾಮದೊಳಗಿರುವ ರಂಗನಾಥನ ಉತ್ಸವ ಮೂರ್ತಿಯು ಸಂಕ್ರಾಂತಿ ಹಬ್ಬದಲ್ಲಿ ಮೂರು ದಿವಸಗಳ ಕಾಲ ಸುತ್ತಮುತ್ತಲಿನ ಇಪ್ಪತ್ತೊಂದು ಹಳ್ಳಿಗಳನ್ನು ಸುತ್ತಾಡುವುದು ಆಗ ಎಲ್ಲಾ ಗ್ರಾಮದವರು ಹಣ್ಣುಕಾಯಿಗಳನ್ನು ಮಾಡಿಸಿ ಪ್ರಸಾದ ಪಡೆದು ದೇವರ ಕೃಪೆಗೆ ಪಾತ್ರರಾಗುವರು. ಉತ್ಸವಮೂರ್ತಿಯನ್ನು ಅಲಂಕಾರ ಮಾಡಿ ಪೂಜಿಸಿ ಊರ ಜನರೆಲ್ಲರೂ ಭಕ್ತಿ ಸಮರ್ಪಣೆಯನ್ನು ಮಾಡಿ ಅಡ್ಡೆಯನ್ನು ಬಿಗಿದು ಅನಂತರ ಊರ ರಕ್ಷಾ ದೇವತೆಯಾದ ಲಕ್ಷ್ಮೀದೇವಿ/ ಗುಡಿಸಲಮ್ಮ ದೇವಸ್ಥಾನದ ಹತ್ತಿರ ಅರಳಿ ಮತ್ತು ಬೇವಿನಮರದ ಮಂಟಪದಲ್ಲಿಟ್ಟು ಪೂಜೆ, ಪುನಸ್ಕಾರಗಳು ನಡೆದ ಅನಂತರ ಮಂಗಳಾರತಿ ಮಾಡಿ ಉತ್ಸವಮೂರ್ತಿಯನ್ನು ಬೇರೆ ಊರುಗಳಿಗೆ ಅಡ್ಡೆಯ ಮುಖಾಂತರ ಬೇರೆ ಊರಿಗೆ ಕೊಂಡೊಯ್ಯುವುದು ವಾಡಿಕೆ. ಉತ್ಸವಮೂರ್ತಿಯು ಮತ್ತೊಂದು ಊರಿಗೆ ಸಮೀಪಿಸುತ್ತಿದ್ದಂತೆಯೇ ಆ ಊರಿನ ಜನರು ಬಂದು ಉತ್ಸವಮೂರ್ತಿಯ ಅಡ್ಡೆಯನ್ನು ಸ್ವೀಕರಿಸಿ ಆ ಊರಿನ ಎಲ್ಲಾ ಮನೆಗಳನ್ನು ಹತ್ತಿರ ಉತ್ಸವಮೂರ್ತಿಯನ್ನು ಹಣ್ಣುಕಾಯಿಯನ್ನು ಮಾಡಿಸಿ ತೀರ್ಥವನ್ನು ಸ್ವೀಕರಿಸುತ್ತಾರೆ. ಉತ್ಸವಮೂರ್ತಿಯು ಅಡ್ಡೆಯ ಜೊತೆಯಲ್ಲಿ ದೇವರ ಉಸ್ತುವಾರಿಗೆ ಹೋದವರಿಗೆ ಸ್ಥಳೀಯರು ಫಲಾಹಾರಗಳನ್ನು ಕೊಟ್ಟು ಸತ್ಕರಿಸುವುದು ರೂಢಿ ಸಂಪ್ರದಾಯ. ಒಂದು ಊರನ್ನು ಅಡ್ಡೆಯಾಡಿದ ಅನಂತರ ಮತ್ತೊಂದು ಗ್ರಾಮಕ್ಕೆ ಕೊಂಡೊಯ್ಯುತ್ತಾರೆ. ಸತಿಗರಹಳ್ಳಿ, ಅವೇರಹಳ್ಳಿ, ಚೆನ್ನಂಗಿನಹಳ್ಳಿ, ಬೀಕನಹಳ್ಳಿ, ಬೀರನಹಳ್ಳಿ ಕೊಪ್ಪಲು ಏರಲಾಪುರ, ಜಿನ್ನೇನಹಳ್ಳಿ, ಬ್ಯಾಡರಹಳ್ಳಿ, ಬ್ಯಾಡರಹಳ್ಳಿ ಕೊಪ್ಪಲು, ಹೀರೇಗೌಡನಹಳ್ಳಿ, ಮಾರನಾಯಕನಹಳ್ಳಿ, ಸೀನೂರು ಮೊದಲಾದ ಹಳ್ಳಿಯನ್ನ ಒಳಗೊಂಡಂತೆ ದಿನಕ್ಕೆ ಮೂರು–ನಾಲ್ಕು ಗ್ರಾಮಗಳಂತೆ ಮೂರು ದಿವಸಗಳ ಕಾಲ ಊರೂರು ಸುತ್ತುತ್ತದೆ. ದಿನಕ್ಕೆ ಮೂರು ನಾಲ್ಕು ಊರು ಸುತ್ತಿದ ಮೇಲೆ ಪುನಃ ಕಬ್ಬತ್ತಿ ಗ್ರಾಮಕ್ಕೆ ಬಂದು ಆಂಜನೇಯ ಗುಡಿಯಲ್ಲಿ ತಂಗುವುದು ರೂಢಿಯಲ್ಲಿದೆ. ಪುನಃ ಮಾರನೆಯ ದಿನ ಊರೂರು ಸುತ್ತಲು ಹೊರಡುತ್ತದೆ. ಹೀಗೆ ಪ್ರತಿ ಊರಿನಲ್ಲಿಯೂ ಪೂಜೆ ಪುನಸ್ಕಾರಗಳು ನಡೆಯುತ್ತದೆ. ಕೊನೆಯದಾಗಿ ಕಬ್ಬತ್ತಿ ಗ್ರಾಮದಲ್ಲಿ ಮನೆಯನ್ನೆಲ್ಲ ಸುತ್ತುತ್ತದೆ. ಇಲ್ಲಿಯೂ ಸಹ ಕಾಯಿ ಮಾಡಿ ಪ್ರಸಾರ ಸ್ವೀಕರಿಸುತ್ತಾರೆ.

ಯುಗಾದಿಯ ದಿನದಂದು ರಂಗನಾಥ ಸ್ವಾಮಿಗೆ ಪೂಜೆ ಮಾಡಿಸಿ ಅಲ್ಲಿಯ ಅರ್ಚಕರು ಕೊಡುವ ಬೇವು ಬೆಲ್ಲವನ್ನು ಮನೆಯವರೆಲ್ಲರೂ ತಿಂದು ಇತರೆ ಕಾರ್ಯಗಳ ಕಡೆ ಮಗ್ನರಾಗುತ್ತಾರೆ. ಹೊಸವರ್ಷದ ಈ ಸಂದರ್ಭದಲ್ಲಿ ಕಷ್ಟಸುಖವು ಒಟ್ಟಿಗೆ ಬರಲಿ ಎಂಬ ನಂಬಿಕೆಯಿಂದ ಬೇವು ಬೆಲ್ಲವನ್ನು ತಿನ್ನುತ್ತಾರೆ. ಬೇವನ್ನು ಕಷ್ಟದ ಪ್ರತಿನಿಧಿಯಾಗಿ, ಬೇವನ್ನು ಸುಖದ ಪ್ರತಿನಿಧಿಯಾಗಿ ಸ್ವೀಕರಿಸುತ್ತಾರೆ. ಭಗವಂತ ಎಲ್ಲವನ್ನು ನಡೆಸುವ ಶಕ್ತಿ ಕೊಡಲೆಂದು ತಿನ್ನುತ್ತಾರೆ.

**ಆಂಜನೇಯ ದೇವಾಲಯ:**

ಬ್ರಹ್ಮಚಾರಿಗಳಿಗೆ ಆದರ್ಶವಾದ ಆಂಜನೇಯನನ್ನು ಹಿಂದೆ ಜಟ್ಟಿಗಳು ಮತ್ತು ಮಲ್ಲರು ಆರಾಧಿಸುತ್ತಿದ್ದರಂತೆ. ಈ ಗ್ರಾಮದ ಆಂಜನೇಯ ಗುಡಿಯನ್ನ ಒಂದೆರಡು ಶತಮಾನಗಳ ಹಿಂದೆ ಕಟ್ಟಿರುವಂತಹದ್ದು. ಇಂದು ನವೀಕರಣಗೊಳ್ಳುತ್ತಿದೆ. ಊರಿನ ಹೆಬ್ಬಾಗಿಲಿನಲ್ಲಿ ಆಂಜನೇಯ ಗುಡಿಯಿದ್ದು, ವೀರಾಂಜನೇಯ ಗುಡಿಯೆಂದು ಕರೆಯುತ್ತಾರೆ. ಇಲ್ಲಿ ಶ್ರೀರಂಗನಾಥನ ಉತ್ಸವ ಮೂರ್ತಿಯು ಸಂಕ್ರಾಂತಿಯ ಸಮಯದಲ್ಲಿ ಇಡುತ್ತಾರೆ. ಅನಂತರ ಪಕ್ಕದ ಊರುಗಳಿಗೆ ತೆಗೆದುಕೊಂಡು ಹೋಗುತ್ತಾರೆ ಮತ್ತೆ ಪುನಃ ಅನಂತರ ಪಕ್ಕದ ಊರುಗಳಿಗೆ ತೆಗೆದುಕೊಂಡು ಹೋಗುತ್ತಾರೆ ಮತ್ತೆ ಪುನಃ ರಾತ್ರಿಗೆ ತಂದಿಟ್ಟ ಪುನಃ ಬೆಲೆಗೆ ಮತ್ತೊಂದು ಊರಿಗೆ ಕೊಂಡೊಯ್ಯುತ್ತಾರೆ. ಹೀಗೆ ಸಂಕ್ರಾಂತಿ ಹಬ್ಬದ ಮೊದಲ ಮೂರು ದಿನ ಈ ದೇವಾಲಯದಲ್ಲಿ ಶ್ರೀರಂಗನ ಉತ್ಸವ ಮೂರ್ತಿಯನ್ನು ರಾತ್ರಿಯ ಸಮಯದಲ್ಲಿ ಇಟ್ಟುಕೊಂಡು ಕಾಯುತ್ತಾರೆ. ಶ್ರೀರಾಮನ ಭಕ್ತನಾದ, ಸೇವಕನಾದ ಹನುಂತನನ್ನು ಜನಪದರು ಭಕ್ತಿಯಿಂದ ಗೌರವದಿಂದ ಆರಾಧಿಸುತ್ತಾರೆ.

**ಮಾರಿಗುಡಿಗಳು:**

ಮಾರಿಗುಡಿಗಳಿಲ್ಲದ ಊರೇ ಇಲ್ಲ ಎನ್ನಬಹುದು. ಬೇಸಿಗೆಯಲ್ಲಿ ಮಲೇರಿಯಾ, ಪ್ಲೇಗ್‌ನಂತಹ ರೋಗಗಳು ಹರಡಿದಾಗ ಮಾರಿಯಮ್ಮನನ್ನು ಪೂಜಿಸಿ ಎಡೆ ಅರ್ಪಿಸಿ ಊರಿನ ಗಡಿದಾಟಿಸುವ ಸಂಪ್ರದಾಯವಿದೆ. 'ಮಾರಿ ಮುನಿದರೆ ಊರೇ ಹಾಳು' ಎಂದು ನಂಬುವ ಇಲ್ಲಿನ ಜನರು ಕೋಳಿ, ಕುರಿಗಳನ್ನು ಹರಕ್ಕೆ ಒಪ್ಪಿಸಿ ಆಕೆಯ ಮನ ಸಂತೈಸುತ್ತಾರೆ. ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ ಪುನಸ್ಕಾರಗಳು ಸಲ್ಲುತ್ತದೆ.

**ಶನಿದೇವರು**

ಇಲ್ಲಿನ ಜನಪದದಲ್ಲಿ ಹೆಚ್ಚಿನ ಭಯಭಕ್ತಿಯನ್ನುಂಟು ಮಾಡುವ ದೇವರೆಂದರೆ ಶನಿದೇವರು. ಶನಿ ಹೆಗಲೇರಿದರೆ ಕಷ್ಟಗಳು ತಪ್ಪಿದಲ್ಲ ಎನ್ನುವ ಈ ಗ್ರಾಮದ ಜನರು

ಕಾಗೆಯನ್ನು ಶನಿದೇವರ ವಾಹನವೆಂದು ತಿಳಿದು ಅದನ್ನು ಹೊಡೆಯುವುದಾಗಲಿ ಬೈಯುವುದಾಗಲೀ ಮಾಡದೇ ಪ್ರತಿ ಶನಿವಾರ ಶನಿದೇವರಿಗೆ ವಿಶೇಷ ಪೂಜೆಸಲ್ಲಿಸುತ್ತಾರೆ. ಮನೆಯಲ್ಲಿ ಶನಿ ಮಹಾತ್ಮೆ ಕಥೆ ಹೇಳಿಸಿದರೆ ಶ್ರೇಯಸ್ಸೆಂದು ತಿಳಿದು ಇಲ್ಲಿನ ಜನರು ವಾರಕ್ಕೊಮ್ಮೆ ಮನೆಯಲ್ಲಿ ವಿಶೇಷ ಪೂಜೆ ಮಾಡಿಸಿ ಕಥೆ ಹೇಳಿಸುವ ಸಂಪ್ರದಾಯ ರೂಢಿಯಲ್ಲಿದೆ.

**ಭೂತಪ್ಪನ ದೇವಸ್ಥಾನ**

ಊರಿನ, ಬೆಟ್ಟದ ರಕ್ಷಕನಾದ ಭೂತಪ್ಪನ ದೇವಸ್ಥಾನಕ್ಕೆ ಈ ದೇವರ ಒಕ್ಕಲಿನವರು. ಹಿರಿಯ ಮಗನ ಮಂಗಳಕಾರ್ಯದಲ್ಲಿ ಆಸೆ ಹಾಕುವುದಕ್ಕೂ ಒಂದು ದಿನ ವ್ಯತ್ಯಾಸ ಇರುವಂತೆ ಮರಿಕಡಿದು ಭೂತಪ್ಪನಿಗೆ ಸೇವೆ ಮಾಡಬೇಕು ಇಲ್ಲಿದಿದ್ದರೆ ಅಪಶಕುನ ಆಗುತ್ತದೆ ಎಂಬ ನಂಬಿಕೆ ಇದೆ. ಮರಿಕಡಿದು ತಳಿಗೆ ಕೊಡುವಾಗ ಅನ್ನದ ರಾಶಿ ಸುರಿದು ಮಾಂಸದ ಸಾರು ಬಿಟ್ಟು ಪೂಜೆ ಮಾಡಿದ ಮೇಲೆ ಆ ತಳಿಗೆಯು ವಿಭಾಗ ಆಗುತ್ತದೆ ಎಂಬ ನಂಬಿಕೆ ಈ ಜನರಲ್ಲಿದ್ದು ಇಂದು ಆ ದೇವಾಲಯವನ್ನು ಕೆಡವಿ ಮತ್ತು ಜಾಗದಲ್ಲಿ ಪುನಃ ದೊಡ್ಡ ದೇವಾಲಯವನ್ನು ನಿರ್ಮಿಸಲಾಗುತ್ತಿದೆ.

ಕಬ್ಬತ್ತಿ ಗ್ರಾಮವು ಧಾರ್ಮಿಕವಾಗಿ ಒಂದೇ ಒಂದು ಧರ್ಮವಾಗಿ ಹಿಂದೂ ದರ್ಮ ಇದ್ದರೂ ಸುತ್ತುಮುತ್ತಲಿನ ಗ್ರಾಮದಲ್ಲಿರುವ ಅನ್ಯಧರ್ಮೀಯರೊಂದಿಗೆ ಸಹಬಾಳ್ವೆಯಿಂದ ಜೀವನ ನಡೆಸುತ್ತಿದ್ದಾರೆ. ಹಲವಾರು ಜಾತಿ-ಪಂಗಡಗಳು ಇದ್ದರೂ ಸಹ ಜಾತಿ ಜಾತಿಗಳ ನಡುವೆ ವೈಶಮ್ಯಗಳಿಲ್ಲದೆ ಅನ್ಯೋನ್ಯವಾಗಿ ಜೀವನ ನಡೆಸುತ್ತಿದ್ದಾರೆ.

# ಅಧ್ಯಾಯ – ೫

# ಸಾಂಸ್ಕೃತಿಕ ವಿಚಾರಗಳು

## ೧. ಸಾಂಸ್ಕೃತಿಕ ಹಬ್ಬಗಳು:

ಹಬ್ಬಗಳು ಜನ ಜೀವನದ ಜೊತೆಯಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡಿವೆ. 'ಹಬ್ಬ' ಎಂಬ ಪದ ಮೂಲತಃ 'ಪರ್ವನ್' ಶಬ್ದದ ತದ್ಭವವಾಗಿದೆ. ನೆಲದ ಸಂಸ್ಕೃತಿಯ ನೀತಿ ನಿಯಮಗಳ ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾರೂಪದ ಮೊತ್ತವೇ ಹಬ್ಬಗಳು. ಕಬ್ಬತ್ತಿ ಗ್ರಾಮದಲ್ಲಿ ವಿವಿಧ ಜಾತಿಯ ಜನರು ನೆಲಸಿರುವುದರಿಂದ ತನ್ನದೆಯಾದ ಜನಪದ ಹಬ್ಬಗಳು ಆಚರಣೆಯಲ್ಲಿವೆ. ಈ ಗ್ರಾಮದಲ್ಲಿ ಒಂದೇ ಧರ್ಮದ ಜನರು ಇರುವುದರಿಂದ ಸಾರ್ವಜನಿಕ ಹಬ್ಬಗಳಾದ ಯುಗಾದಿ, ಗೌರಿ, ಗಣೇಶ, ದೀಪಾವಳಿ, ಆಯುಧಪೂಜೆ, ಸಂಕ್ರಾಂತಿ, ನಾಗಪಂಚಮಿ, ಶಿವರಾತ್ರಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಇವುಗಳ ಜತೆಗೆ ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವ ದಿನಾಚರಣೆಗಳನ್ನು ಆಚರಿಸುತ್ತಾರೆ. ಕಬ್ಬತ್ತಿ ಗ್ರಾಮದ ಹಬ್ಬಗಳನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಗುರ್ತಿಸಿ ಹಲವು ರೀತಿಯಲ್ಲಿ ವಿಂಗಡಿಸಬಹುದು. ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಹಬ್ಬಗಳನ್ನು ಸ್ಥೂಲವಾಗಿ ಮೂರು ಭಾಗಗಳಾಗಿ ವಿಂಗಡಿಸಿಕೊಳ್ಳಬಹುದು.

೧) ಸಾರ್ವಜನಿಕ ಹಬ್ಬಗಳು

೨) ವೈದಿಕ ಸಂಪ್ರದಾಯದ ಹಬ್ಗಳು

೩) ಜನಪದರ ಹಬ್ಬಗಳು

### ೧. ಸಾರ್ವಜನಿಕ ಹಬ್ಬಗಳು

ಸಾರ್ವಜನಿಕ ಹಬ್ಬಗಳನ್ನು ಕಬ್ಬತ್ತಿ ಗ್ರಾಮದಲ್ಲಿ ಎಲ್ಲಾ ಜನರು ಆಚರಿಸುವಂತಹವುಗಳು. ಯುಗಾದಿ. ಗೌರಿ–ಗಣೇಶ, ಆಯುಧಪೂಜೆ, ದೀಪಾವಳಿ, ನಾಗರಪಂಚಮಿ, ಸಂಕ್ರಾಂತಿ, ಸಿವರಾತ್ರಿ ಮುಂತಾದ ಹಬ್ಬಗಳು ಸಾರ್ವತ್ರಿಕ ಹಬ್ಬಗಳ ಸಾಲಿನಲ್ಲಿ ಬರುತ್ತವೆ. ಸಾರ್ವಜನಿಕ ಹಬ್ಬಗಳು ವೈದಿಕ ಸಂಪ್ರದಾಯ ಹಾಗೂ ಜನಪದರಿಂದ ಆಚರಣೆಗೊಳ್ಳುತ್ತ ಬಂದಿವೆ. ಹಬ್ಬಗಳು ಒಂದೇ ಆಗಿದ್ದರೂ ಶಿಷ್ಟರು ಮತ್ತು ಜನಪದರ ಆಚರಣೆಗಳು ಬಹಳ ಬದಲಾಗಿದ್ದು ಅವುಗಳಲ್ಲಿ ಹಲವು ವೈಶಿಷ್ಟ್ಯಗಳಿರುವುದನ್ನು ಗಮನಿಸಬಹುದು.

**ಯುಗಾದಿ:** ಯುಗಾದಿಯ ದಿನ ಆನಂದವಾಗಿದ್ದರೆ ವರ್ಷ ಪೂರ್ತಿ ಆನಂದ ನೆಲಸುವುದೆಂದು ಇಲ್ಲಿಯ ನಂಬಿಕೆ. ಯುಗಾದಿಯು ಚೈತ್ರಮಾಸದ ಮೊದಲ ದಿನದ ಹಬ್ಬ. "ಹಿಂದೂಗಳಲ್ಲಿ ವರ್ಷದಲ್ಲಿ ಯುಗಾದಿಯನ್ನು ಹೊಸವರ್ಷದ ಮೊದಲನೆಯ

ಹಬ್ಬವಾಗಿ ಆಚರಿಸುತ್ತಾರೆ. ಈ ಶುಭ ದಿನದಂತು ಎಲ್ಲರೂ ಜಾತಿ, ಮತ, ಭೇದವಿಲ್ಲದೆ ಬಡವ ಸಿರಿವಂತರೆಂಬ ತಾರತಮ್ಯ ಇಲ್ಲದೆ ಮನೆಮಂದಿಯೆಲ್ಲ ಅಭ್ಯಂಜನ ಸ್ನಾನ ಮಾಡಿ ಹೊಸ ಬಟ್ಟೆಯುಟ್ಟು ದೇವರಿಗೆ ಪೂಜೆಯ ಬಳಿಕವೇ ಬೇವು ಬೆಲ್ಲ ಸೇವನೆ, ಸಿಹಿ ಊಟವಾದ ಅಡಿಗೆ, ಜಾನಪದ ಕ್ರೀಡೆಗಳು ಹೊನ್ನಾರು ಕಟ್ಟುವುದು, ಚಂದ್ರ ದರ್ಶನ ಮಾಡುವುದು. ಪಂಚಾಂಗ ಶ್ರವಣ, ವರ್ಷತೊಡಕು ಮಾಡುವುದು ಈ ಹಬ್ಬದ ಇಲ್ಲಿಯ ವೈಶಿಷ್ಟ್ಯ. ಯುಗಾದಿ ಹಬ್ಬದ ಆಚರಣೆಯಲ್ಲಿ ಹಿಂದಿನ ದಿನದ ಅಮಾವಾಸ್ಯೆಯಿಂದಲೇ ಆರಂಭವಾಗುತ್ತದೆ, ಸುಣ್ಣಬಣ್ಣಗಳಿಂದ ಮನೆಯನ್ನೆಲ್ಲಾ ಅಲಂಕರಿಸಿ ಮನೆಯ ಬಾಗಿಲಿಗೆ ಮಾವು ಬೇವು ತಳಿರುತೋರಣ ತೂಗಿಬಿಡುತ್ತಾರೆ. ಮುಂಬಾಗಿಲಿನ ಆಚೆಯ ಬೀದಿಯ ತನಕ ಕಸ ಬಳಿದು ರಂಗೋಲಿ ಬಿಡುತ್ತಾರೆ. ನೀರಿಗೆ ಬೇವಿನ ಪತ್ರೆಯನ್ನು ಹಾಕಿ ಬಿಸಿ ಬಿಸಿಯಾಗಿ ಕಾಯಿಸಿದ ನೀರಿನಲ್ಲಿ ಎಣ್ಣೆ ಎರೆದುಕೊಂಡು ಸ್ನಾನ ಮಾಡಿ ಮನೆಮಂದಿಗಳೆಲ್ಲಾ ಹೊಸ ಬಟ್ಟೆಧರಿಸಿ ಆಯಾಯ ಜಾತಿಗಳ ಆಚರಣೆ ಪ್ರಕಾರವಾಗಿ ಹಣೆಗೆ ವಿಭೂತಿ, ಕುಂಕುಮ ಗಂಧಗಳನ್ನು ಇಟ್ಟುಕೊಂಡ ಊರಿನ ಪ್ರತಿಯೊಂದು ಶಿಷ್ಟ ಹಾಗೂ ಜನಪದ ದೇವಾಲಯಕ್ಕೂ ಗಂಧದ ಕಡ್ಡಿ, ಹಣ್ಣು, ಕಾಯಿ, ಕರ್ಪೂರ, ಕಣಗಲೆಹೂವು, ಬಿಲ್ವಪತ್ರೆ, ಬೇವಿನ ಪತ್ರೆ ತೆಗೆದುಕೊಂಡು ಹೋಗಿ ಪೂಜೆ ಸಲ್ಲಿಸಿ 'ಭವಿಷ್ಯದಲ್ಲಿ ಸುಖಜೀವನದ ಕನಸು ಕಂಡು ಅದನ್ನು ನನಸು ಮಾಡೆಂದು ಭಗವಂತನಲ್ಲಿ ಪ್ರಾರ್ಥಿಸಿ" ಮಂಗಳಾರತಿ ಥೀರ್ಥ ಪ್ರಸಾದ ತೆಗೆದುಕೊಂಡು ಬಂದು ಅದನ್ನು ಮನೆಯವರಿಗೆಲ್ಲಾ ಹಂಚುತ್ತಾರೆ.

ಬೇವು ಬೆಲ್ಲ ತಿನ್ನುವ ಮುನ್ನ ದೀರ್ಘ ಆಯುಷ್ಯಪ್ರಾಪ್ತಿಯಾಗಲಿ ಉತ್ತಮ ಆರೋಗ್ಯ, ವಜ್ರದಂತೆ ಗಟ್ಟಿಯಾದ ದೇಹ ನಮ್ಮದಾಗಲಿ, ಸಕಲ ಸಂಪತ್ತುಗಳು ಪ್ರಾಪ್ತಿಯಾಗಲಿ ಸರ್ವಕಷ್ಟಗಳು ನಿವಾರಣೆಯಾಗಲಿ ಎಂದು ಪ್ರಾರ್ಥನೆ ಸಲ್ಲಿಸುತ್ತಾರೆ. ಈ ದಿನ ಇಡ್ಲಿ, ಸಿಹಿಕಾರ ಚಟ್ನಿ ಹುಳಿಯನ್ನ, ಮಾವಿನಕಾಯಿ ಚಿತ್ರಾನ್ನವನ್ನು ಹೆಚ್ಚಾಗಿ ಮಾಡುತ್ತಾರೆ. ಗ್ರಾಮೀಣರು ಯುಗಾದಿಯಲ್ಲಿ ಬೇವುಬೆಲ್ಲದ ಹಬ್ಬ ಎಂದೇ ಕರೆಯುತ್ತಾರೆ. ಈ ಹಬ್ಬವು ಒಂದು ಜಾನಪದೀಯ ಆಚರಣೆ ಬೇವುಕಹಿಯಾಗಿದ್ದು ಬೆಲ್ಲ ಸಿಹಿಯಾದದ್ದು ಇವೆರಡರ ಮಿಶ್ರಣವಿರಬೇಕು ಎಂಬುದು ಬದುಕಿನ ಸೂತ್ರ. ಅದು ಎಲ್ಲರಿಗೂ ಗೊತ್ತಿರುವುದು. ಆದರೆ ಬೇವಿನಲ್ಲಿ ಕಫ ಮತ್ತು ಬಿಸಿಲ ತಾಪಗಳನ್ನು ಸಹಿಸಲು ಜನ ಈ ಎಲೆಯನ್ನು ಸೇವಿಸುವ ಸಂಪ್ರದಾಯ ಬಂದಿರಬಹುದು. ರೈತರಿಗೆ ಬೇವು ಒಂದು ಒಳ್ಳೆಯ ಕ್ರಿಮಿನಾಶಕ ಎಂಬ ಸಂಗತಿಯು ಗೊತ್ತು. ಇದರೊಂದಿಗೆ ಉಷ್ಣವಾದ ಬೇವನ್ನು ಬೆರಸಿ ತಿಂದರೆ ಜೀರ್ಣಶಕ್ತಿ ವೃದ್ಧಿ ಆಗುತ್ತದೆ ಎಂಬ ಆರೋಗ್ಯ ರಹಸ್ಯವೂ ಅವರಿಗೆ ಗೊತ್ತು. ದೇಹದ ವಿಷಪೂರಿತ ರೋಗಳಿಗೆ ಬೇವು ನಿವಾರಕ ಔಷಧವೂ ಆಗಿದೆ.

ಯುಗಾದಿ ಮಧ್ಯಾಹ್ನದ ಹಬ್ಬ. ಈ ದಿನ ಶಿಷ್ಟರಿಂದ ಜನಪದದವರೆಗೆ ಎಂತಹ ಬಡವರೇ ಆದರೂ ಇಡ್ಲಿ, ಹುಳಿಯನ್ನ, ಕಾಯಿ ಹೋಳಿಗೆ ಅಥವಾ ಬೇಳೆ ಹೋಲಿಗೆ ಸಿಹಿಯೂಟ ಮಾಡುತ್ತಾರೆ. ಈ ದಿನ ಊಟವಾದ ಅನಂತರ ಸಂಜೆ ಸಂತೋಷಾರ್ಥವಾಗಿ ಊರಿನಲ್ಲಿರುವ ದೊಡ್ಡವರು ಮತ್ತು ಮಕ್ಕಳು ಒಂದೊಂದು ಕಡೆ ಸೇರಿ ಜನಪದ ಆಟೋಟ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ದೊಡ್ಡವರು ಕಾಯಿ ಒಡೆಯುವ ಆಟ ಆಡುತ್ತಾರೆ. ಮಕ್ಕಳು ಓಡುವುದು, ಬುಗುರಿ, ಗೋಲಿ, ಕಬ್ಬಡಿ ಇತ್ಯಾದಿ ಆಟಗಳನ್ನು ಆಡಿಕೊಂಡು ಹೊಸ ವರ್ಷದ ದಿನದಂದು ಕಾಲ ಕಳೆಯುತ್ತಾರೆ.

ಹಬ್ಬದ ದಿನ ಸಂಜೆ ವೇಳೆಗೆ ಮನೆಯಲ್ಲಿ ಯಾರಾದರೂ ಒಬ್ಬರು ಹಿರಿಯರು 'ಹೊನ್ನಾರು' ಕಟ್ಟುತ್ತಾರೆ. ಊರಿನ ಪ್ರಮುಖರ ಮುಂದಾಳತ್ವದಲ್ಲಿ ಎಲ್ಲರೂ ತಮ್ಮ ದನಗಳನ್ನು ಮೈತೊಳೆದು ಸಿಂಗರಿಸಿಕೊಂಡು ನೊಗ ಹಾಕಿಕೊಂಡು ಎಲ್ಲರು ತಮ್ಮ ಉಳುವ ಎತ್ತುಗಳಿಗೆ ನೇಗಿಲನ್ನು ಕಟ್ಟಿಕೊಂಡು ಎತ್ತುಗಳಿಗೆ ಹೊಸ ಹಣೆಕಟ್ಟು, ಹೊಸ ಮುಖವಾಡ, ಹೊಸ ಹಗ್ಗವನ್ನು ಹಾಕಿಕೊಂಡು ಒಳ್ಳೆಯ ಮೂಹೂರ್ತದಲ್ಲಿ ತಮ್ಮ ತಮ್ಮ ಜಮೀನಿಗೆ ಹೋಗಿ ಮೊದಲ ದಿನದ ಆರಂಭವನ್ನು ಪ್ರಾರಂಭಿಸುತ್ತಾರೆ. ಯುಗಾದಿಯನ್ನು ಕುರಿತಂತೆ ಗಾದೆಯನ್ನು ಹೇಳುತ್ತಾರೆ. 'ಉಗಾದಿ ತನಕ ಬರಕೋ, ಉಗಾದಿ ಬಂದ ಮ್ಯಾಗೆ ಹರಕೋ', ಯುಗಾದಿ ವೇಳೆಗೆ ಹೊಲದಲ್ಲಿಯ ಧಾನ್ಯವೆಲ್ಲಾ ಮನೆಗೆ ಬರುತ್ತದೆ. ಯುಗಾದಿಯಿಂದ ಹೊಸ ಲೆಕ್ಕ ಬರೆಯಲು ತಿಳಿಸುತ್ತಾರೆ. ಭೂ ಮಾತೆ ಕರುಣಿಸಿದ ಫಲವನ್ನು ಸಡಗರ ಸಂಭ್ರಮದಿಂದ ಮನೆ ತುಂಬಿಸಿಕೊಂಡು ಸಮೃದ್ಧಿಯ ಕಾಲವದು. ಈ ಹಬ್ಬದ ಸಂಜೆ ವೃದ್ಧರಾದಿಯಾಗಿ ಬಿದಿಗೆ ಚಂದ್ರದರ್ಶನವನ್ನು ಮಾಡಿ ಪರಸ್ಪರ ಶುಭ ಕಾಮನೆಗಳನ್ನು ವಿನಿಮಯ ಮಾಡಿಕೊಳ್ಳವುದರಿಂದ ಆಯುವೃದ್ಧಿಯಾಗುತ್ತದೆ ಎಂಬ ನಂಬಿಕೆ ಇದೆ. ಈ ದಿನ ಚಂದ್ರನ ತುದಿಯು "ದಕ್ಷಿಣಕ್ಕೆ ಹೆಚ್ಚಾಗಿದ್ದ ಪಕ್ಷ ತೆಂಕಲು ಹುಣ್ಣಿಮೆ ಎಂಬುದಾಗಿ ಬಡಗಲು ಹೆಚ್ಚಾಗಿದ್ರೆ ದರಿದ್ರ" ಎನ್ನುತ್ತಾರೆ. ಈ ದಿನ ಬೆಳಗ್ಗೆ, ಏಳುವಾಗ ಚಂದ್ರನಾಡಿಯಿಂದ ಉಸಿರಾಡುತ್ತ ಏಳಬೇಕೆಂಬ ಶಾಸ್ತ್ರವಿದೆ. ನಮ್ಮ ಮೂಗಿನ ಎಡ ಹೊರಳೆಯನ್ನ ಚಂದ್ರನಾಡಿ, ಬಲ ಹೊರಳೆಯನ್ನ ಸೂರ್ಯನಾಡಿ ಎಂದು ಕರೆಯುತ್ತಾರೆ.

ಗ್ರಾಮದ ಮುಖಂಡರುಗಳೆಲ್ಲ ಒಂದು ಕಡೆ ಸೇರಿ ಪಂಚಾಂಗ ಶ್ರವಣ ಕೇಳುತ್ತಾರೆ. ಇದರ ಹಿಂದಿರುವ ಆಶಯವು ಜಾನಪದೀಯವಾದದ್ದೇ. ರೈತನಿಗೆ ಬರಲಿರುವ ವರ್ಷದಲ್ಲಿ ಮಳೆ-ಬೆಳೆ ಹೇಗೆ ಎಂದು ತಿಳಿಯುವ ಆತುರ-ಕಾತುರ ಕೃಷಿ ಜೀವನದಲ್ಲಿ ಇದು ಅತ್ಯಗತ್ಯ. ಈ ದಿನ ಬರುವ ವರ್ಷದ ಮಳೆ -ಬೇಳೆ ಪರಿಸ್ಥಿತಿ ಕ್ಷಾಮ, ರೋಗರುಜಿನಗಳ ಸ್ಥಿತಿ, ಆರೋಗ್ಯ, ಆದಾಯ ಕಷ್ಟನಷ್ಟಗಳ ಹಳ್ಳಿಯ ಹಳ್ಳಿಯ ದೇಶದ ಮತ್ತು ವ್ಯಕ್ತಿಯ ರಾಶಿ ಫಲ ಹಾಗೂ ಗ್ರಹಗತಿಗಳನ್ನು ಹೇಗೆ ಎಂಬುದನ್ನು

ತಿಳಿಯುವರು. ಪಂಚಾಂಗ ಶ್ರಾವಣವನ್ನು ಭಕ್ತಿ ಶ್ರದ್ಧೆಯಿಂದ ಕೇಳುವವರಿಗೆ ಮಂಗಳವಾಗುತ್ತದೆ ಎಂಬ ನಂಬಿಕೆಯಿದೆ. ಬ್ರಾಹ್ಮಣರ ಮನೆಯಲ್ಲಿ ಪಂಚಾಂಗ ನೊಡುವ ಪದ್ಧತಿ ಇದ್ದರೆ ಇತರ ಜನಾಂಗಗಳ ಮನೆಯಲ್ಲಿ ಪ್ಯಾಕೆಟ್ ಕ್ಯಾಲೆಂಡರ್ ನೋಡುವುದು ರೂಢಿಯಲ್ಲಿದೆ.

ಹಬ್ಬದ ಮಾರನೆಯ ದಿನ ವರ್ಷತೊಡಕು. ನಮ್ಮನ್ನು ನಾವು ಸತ್ಕಾರ್ಯದಲ್ಲಿ ತೊಡಗಿಸಿಕೊಳ್ಳುವ ದಿನ. ಅಲ್ಲದೆ ಇಡೀ ವರ್ಷದ ತೊಡಕುಗಳೆಲ್ಲಾ ನಿವಾರಣೆ-ಯಾಗಲೇಂದು ದೇವರಲ್ಲಿ ಪ್ರಾರ್ಥನೆ ಸಲ್ಲಿಸುವ ದಿನವಿದು. ಜನಪದರಲ್ಲಿ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯ. ಈ ದಿನ ಮಾಂಸಾಹಾರಿಗಳು ಮಾಂಸದ ಅಡುಗೆಗಳನ್ನು ಮಾಡಿ ಸಂಬಂಧಿಕರನ್ನು ಸ್ನೇಹಿತರನ್ನು ಕರೆದು ಊಟಕ್ಕೆ ಹಾಕುತ್ತಾರೆ. ಇದೇ ಈ ಹಬ್ಬದ ವರ್ಷದ ತೊಡುಕಿನ ವಿಶೇಷತೆಯಾಗಿರುತ್ತದೆ.

**ಗೌರಿ-ಗಣೇಶ ಹಬ್ಬ:** ಭಾದ್ರಪದ ಮಾಸದ ತದಿಗೆ ಚತುರ್ಥಿ ದಿನಗಳಲ್ಲಿ ಗೌರಿ ಮತ್ತು ಗಣೇಶನ ಹಬ್ಬ ಬರುತ್ತದೆ. ಕೆಲವೊಮ್ಮೆ ಎರಡು ಹಬ್ಬಗಳು ಒಂದೇ ದಿನ ಬರುವುದುಂಟು. ತಾಯಿ ಗೌರಿ ಜತೆಯಲ್ಲೆ ಪುತ್ರ ಗಣೇಶನು ಬಂದರೆ ಗೌರಿ ಗಣೇಶನ ಹಬ್ಬ ಬರುವುದೆಂಬ ನಂಬಿಕೆಯಿದೆ. ಗೌರಿ ಹಬ್ಬ ಹೆಸರೇ ಹೇಳುವಂತೆ ಹೆಣ್ಣುಮಕ್ಕಳ ಹಬ್ಬವಾಗಿದೆ. ಗೌರಿ ಹಬ್ಬಕ್ಕೆ ಗಂಡನ ಮನೆಯಲ್ಲಿರುವ ಹೆಣ್ಣು ಮಕ್ಕಳನ್ನು ಜನಪದರು ವಿಶೇಷವಾಗಿ ಹಬ್ಬಕ್ಕೆ ಆಮಂತ್ರಿಸುವರು. ಈ ದಿನ ಹೆಂಗಸರು, ಹೆಣ್ಣುಮಕ್ಕಳು ಎಣ್ಣೆ ನೀರು ಎರೆದುಕೊಂಡು ಹೊಸ ಬಳೆಯನ್ನು ಉಟ್ಟು, ತೊಟ್ಟು ಗೌರಮ್ಮನನ್ನು ಆಹ್ವಾನಿಸಿ ಪೂಜಿಸುವ ರೀತಿ ಬೇರೆಯ ಊರಿನವರಿಗಿಂತ ಭಿನ್ನ. ಈ ಹಬ್ಬದಲ್ಲಿ ಹಸು, ಕರು, ನೇಗಿಲು, ನೊಗ ಮೊದಲಾದ ಬೆಲೆ ಬೇಸಾಯದಲ್ಲಿ ಬಳಕೆಯಾಗುವ ಉಪಕರಣಕ್ಕೆ ಸಂಬಂಧಿಸಿದವು. ಈ ಹಬ್ಬದಲ್ಲಿ ಪೂಜೆ ಗೊಳ್ಳುವುವು. ಆದ್ದರಿಂದ ಗೌರಿಹಬ್ಬ ವ್ಯವಸಾಯ ಬೇಸಾಯದ ಸಂಸ್ಕೃತಿಗೆ ಸೇರಿದುದಾಗಿದೆ. ಈ ದಿನ ಸುಮಂಗಲಿಯರು ಪತಿ, ಪುತ್ರ, ಪುತ್ರಿಯರಿಗೆ ಕುಟುಂಬಕ್ಕೆ ಆಯಸ್ಸು, ಆರೋಗ್ಯವನ್ನು ತಮಗೆ ಸೌಮಂಗಲ್ಯವನ್ನು ಕೋರುವ ಶುಭದಿನವಿದು.

ಗೌರಿ ಹಬ್ಬದಲ್ಲಿ ಎಲ್ಲಾ ಸಮುದಾಯಗಳಲ್ಲೂ ಮಗಳು. ಅಳಿಯ ಇಬ್ಬರನ್ನು ಆಹ್ವಾನಿಸಿ ಅವರಿಗೆ ಉಂಗುರ, ಕೊರಳಿಗೆ ಚೈನು, ಹೊಸಬಟ್ಟೆ ಮುಂತಾದ ಉಡುಗೊರೆಯನ್ನು ಕೊಟ್ಟು ಉಪಚರಿಸುತ್ತಾರೆ. ಅಲ್ಲದೇ ಪ್ರತಿಯೊಬ್ಬರ ಮನೆಯಲ್ಲೂ ಪರಿಚಿತರಿಗೆ, ಸಂಬಂಧಿಕರಿಗೆ, ಸ್ನೇಹಿತರಿಗೆ ಬಳೆ ತೊಡಿಸುತ್ತಾರೆ. ದೂರದ ಊರಿನಲ್ಲಿ ಇರುವವರಿಗೆ ಈ ಮಂಗಳ ಕಾರ್ಯಕ್ಕೆಂದು ಹಣವನ್ನು ಕೊಡುವ ಅಂಚೆಯ ಮೂಲಕ ಕಳಿಸುವ ಸಂಪ್ರದಾಯವಿದೆ. ಹಣಕಳಿಸುವುದನ್ನು ನಿಲ್ಲಿಸಬಾರದು. ಹಣವನ್ನು ಒಂದು ವರ್ಷ ನೀಡಿದ್ದಕ್ಕಿಂತ ಹೆಚ್ಚಿಗೆ ಕಳಿಸಬಹುದು. ಆದರೆ ಇಳಿಸಬಾರದು ಎಂಬುದು

ಇಲ್ಲಿಯವರ ನಂಬಿಕೆಯಾಗಿದೆ. ಹೆಣ್ಣು ಮಕ್ಕಳನ್ನು ಈ ಹಬ್ಬಕ್ಕೆ ಅಪ್ಪಿತಪ್ಪಿ ಕರೆಯದಿದ್ದರೆ ಮುನಿಸಿಕೊಳ್ಳುವುದುಂಟು. ಆದ್ದರಿಂದ ಎಷ್ಟೇ ಕೆಲಸವಿರಲಿ ಅಥವಾ ಕಷ್ಟವಿರಲಿ ವಾಡಿಕೆ ಇರುವಂತೆ ಅಪ್ಪ ಇಲ್ಲವೇ ಅಣ್ಣ, ತಮ್ಮಂದಿರು ಸೋದರಿಯನ್ನ ಕಾಯಿಕೊಟ್ಟು ಗೌರಿ – ಹಬ್ಬಕ್ಕೆ ಕರೆದು ಬರುವುದುಂಟು. ಈ ಸಮಯದಲ್ಲಿ ರೈತರ ಹೊಲಗದ್ದೆಗಳಲ್ಲಿ ಪೈರು ಬಂದಿರುತ್ತದೆ. ಎಲ್ಲಿ ನೊಡಿದರೂ ಬೆಳೆ ಹಸಿನಿಂದ ಕಂಗೊಳಿಸುತ್ತಿರುತ್ತದೆ. ಆದ್ದರಿಂದ ಜನರೆಲ್ಲಾ ಉತ್ಸಾಹಭರಿತವಾಗಿ ಸಂತೋಷದಿಂದಿರುತ್ತಾರೆ. ಎಲ್ಲೆಲ್ಲೂ ಹಸಿರುನಿಂದ ಕಂಗೊಳಿಸುತ್ತಿದ್ದ ಹೊಲಗದ್ದೆಗಳನ್ನು ಕಂಡು ದೇವರ ಮೇಲೆ ವಿಶೇಷವಾದ ಭಕ್ತಿ ಜನರಿಗೆ ಇರುವುದು ಸಹಜ.

**ಗಣೇಶನ ಹಬ್ಬ:** ಗಣೇಶನ ಹಬ್ಬ ಭಾದ್ರಪದ ಮಾಸದ ಚತುರ್ಥದಿಂದ ಬರುತ್ತದೆ. ಗಣೇಶನಿಗೆ ಹಲವಾರು ಹೆಸರುಗಳಿವೆ. ಅವುಗಳಲ್ಲಿ ಗಣಪತಿ, ವಿನಾಯಕ ಗಜಾನನ ಮೊದಲಾದವು ಗಣೇಶನನ್ನು ವರ್ಷ ಪೂರ್ತಿ ಬರುವ ಹಬ್ಬಗಳಲ್ಲಿ ಮದುವೆ ಮುಂಜಿ ಮೊದಲಾದ ಪೂಜಾ ಕಾರ್ಯಗಳೆಲ್ಲಾ ಸಾಂಪ್ರದಾಯಿಕವಾಗಿ ಪೂಜಿಸಿದರೂ ಈ ಹಬ್ಬದ ಸಮಯದಲ್ಲಿ ವಿಶೇಷವಾಗಿ ವಿನಾಯಕನನ್ನು ಪೂಜಿಸುತ್ತಾರೆ. ತೌರಿಗೆ ಬಂದ ಗೌರಿ ತಾಯಿಯನ್ನು ಮಗ ಗಣೇಶನು ಈ ಹಬ್ಬದ ದಿನ ಕರೆಯಲು ಬರುತ್ತಾನೆಂಬುದು ನಂಬಿಕೆ. ಗಣೇಶನ ಹಬ್ಬದ ದಿನ ಗಂಡಸರು, ಗಂಡುಮಕ್ಕಳು ಎಣ್ಣೆನೀರಿನ ಸ್ನಾನ ಮಾಡುತ್ತಾರೆ. ಗಣೇಶನ ಹಬ್ಬ ವಿಶೇಷವಾಗಿ ಗಂಡುಮಕ್ಕಳ ಮತ್ತು ಗಂಡಸರ ಹಬ್ಬ. ಹಾಗೆಯೇ ಸಾರ್ವಜನಿಕರೆಲ್ಲರೂ ಸಾಂಪ್ರದಾಯಕವಾಗಿ ಪೂಜಿಸುವುದರಿಂದ ಸ್ತ್ರೀಪುರುಷರೆಲ್ಲರೂ ಆಚರಿಸುವ ಹಬ್ಬವೂ ಹೌದು. ವೈದಿಕರು ತಮ್ಮ ಮನೆಯಲ್ಲಿ ಗಣಪತಿ ಕೂರಿಸಿ ಪೂಜಿಸುತ್ತಾರೆ. ಜನಪದರ ಮನೆಗಳಲ್ಲಿ ಹಬ್ಬದ ದಿನ ಗರಿಕೆಯ ಬೆನಕನನ್ನಿಟ್ಟು ಪೂಜಿಸುವುದು ಕಂಡು ಬರುತ್ತದೆ. ವರ್ಷವೆಲ್ಲಾ ಬೀಜ ಬಿತ್ತನೆ ಮಾಡುವಾಗ ಧಾನ್ಯಬಂದಾಗ ಕಣದ ಪೂಜೆಮಾಡುವಾಗ ಗರಿಕೆ ಗಣಪನನ್ನು ರಾಶಿಮೇಲಿಟ್ಟು ಧಾನ್ಯ ಹೆಚ್ಚಲಿ ಎಂದು ಪೂಜಿಸುತ್ತಾರೆ.

ಬಾಲಗಂಗಾಧರನಾಥ ತಿಲಕರ ಪ್ರಯತ್ನದಿಂದ ಸಾಮೂಹಿಕವಾಗಿ ಗಣಪತಿ ಕೂರಿಸುವುದು ಪ್ರತಿ ಹಳ್ಳಿಹಳ್ಳಿಯಲ್ಲೂ ರೂಢಿಗೆ ಬಂದಿದೆ. ಅಂದಿನಿಂದಲೂ ಪ್ರತಿ ಗ್ರಾಮದಲ್ಲೂ ಗಣೇಶನನ್ನು ಒಟ್ಟಾಗಿ ಕೂರಿಸುವುದು ಕಂಡು ಬರುತ್ತದೆ. ಗಣಪತಿಯನ್ನು ಇಡುವಾಗ ಬಣ್ಣದ ಕಾಗದಗಳಿಂದ ಮಂಟಪ ನಿರ್ಮಿಸಿ ಅದನ್ನು ಪಚ್ಚೆ–ಪೈರು, ಹೂವು–ಹಣ್ಣು, ತಳಿರು–ತೋರಣ ಬಾಳೆ ಕಂದುಗಳಿಂದ ಅಂದವಾಗಿ ಅಲಂಕರಿಸಿ, ಧ್ವನಿವರ್ಧಕಗಳು, ವಿದ್ಯುತ್ ದೀಪಗಳಿಂದ ಬೆಳಗಿಸುತ್ತಾರೆ. ಗಣೇಶನ ಪಕ್ಕದಲ್ಲಿ ಗೌರಿಯನ್ನು ಇಡಲಾಗುತ್ತದೆ. ಮಂತ್ರಪಠಣೆ, ೨೧ ಎಳೆ ವಸ್ತ್ರ, ೨೧ ಗರಿಕೆ, ೨೧ ನಮಸ್ಕಾರಗಳ ಮೂಲಕ ಭಕ್ತಿಪೂರ್ವಕವಾಗಿ ಪೂಜೆ ಸಲ್ಲಿಸುತ್ತಾರೆ. ಪ್ರತಿರಾತ್ರಿ ಹರಿಕಥೆ,

ನಾಟಕ, ನೃತ್ಯ, ರಂಗೋಲಿಸ್ಪರ್ಧೆ, ಜನಪದರ ಗೀತೆ ಸ್ಪರ್ಧೆ, ಆರ್ಕೆಸ್ಟ್ರಾ ಮೊದಲಾದ ಮನರಂಜನೆಯ ಕಾರ್ಯಕ್ರಮಗಳನ್ನು ಜನರು ರಾತ್ರಿಯಿಡೀ ಕುಳಿತು ನೋಡುವಂತೆ ಏರ್ಪಡಿಸಲಾಗುತ್ತದೆ. ಎಷ್ಟು ಸಡಗರದಿಂದ ಗಣೇಶನನ್ನು ಕರೆತರುತ್ತಾರೋ ಅಷ್ಟೇ ವೈಭವ ಉತ್ಸಾಹಗಳಿಂದ ವಿಸರ್ಜನಾ ಕಾರ್ಯವನ್ನು ನಡೆಸುತ್ತಾರೆ. ಇದಕ್ಕೂ ಮುಂಚೆ ಊರಿನಲ್ಲೆಲ್ಲಾ ಅಕ್ಕಿ, ಹಣವನ್ನು ಸಂಗ್ರಹಿಸುತ್ತಾರೆ. ಇದಕ್ಕೆ ಹತ್ತಾರು ಜನಭಕ್ತಾದಿಗಳು ಸಹಕರಿಸುತ್ತಾರೆ. ಗಣಪತಿ ಬಿಡುವ ದಿವಸ ವಿವಿಧ ರೀತಿಯ ಅಂದವಾದ ಅಲಂಕಾರ ಪುಷ್ಪ ಮತ್ತು ವಿದ್ಯುತ್ ದೀಪಗಳೊಂದಿಗೆ ಟ್ರ್ಯಾಕ್ಟರ್ ಮೇಲೆ ಕೂರಿಸಿ ವಿವಿಧ ಬಗೆಯ ವಾದ್ಯಗಳು ಪಟಾಕಿಗಳು, ಕುಣಿತ, ಭಜನೆ, ಕೋಲಾಟ ವಿವಿಧ ರೀತಿಯ ದೊಡ್ಡ ದೊಡ್ಡ ವೇಷದ ಹೆಂಗಸರ, ಗಂಡಸರ ಮುಖವಾಡದ ಕುಣಿತ ಮೊದಲಾದ ಹುಡುಗರು ಗಣೇಶನನ್ನು ಕುರಿತು ಹಲವಾರು ರೀತಿಯಲ್ಲಿ ಘೋಷಣೆಗಳಿಂದ ಕೂಗುತ್ತಾ ಕುಣಿಯುತ್ತಾ ಸಂತೋಷ ಪಡಿಸುತ್ತಾರೆ. ಗಣೇಶನ ಮೆರವಣಿಗೆ ಮುಗಿಸಿದ ಮೇಲೆ ಗಣಪತಿಯನ್ನು ಕೆಳಗಿಳಿಸಿ ಮಾಡಿದ ಅಲಂಕಾರದ ವಸ್ತುಗಳಾದ ಹೂವು, ಹಸಿರು ತೋರಣಗಳನ್ನು ತೆಗೆದು ಗಣಪತಿಯ ಜತೆಯಲ್ಲಿ ನೀರಿನಲ್ಲಿ ಬಿಡಲು ತೆಗೆದುಕೊಳ್ಳುತ್ತಾರೆ. ಗಣೇಶನನ್ನು ಬಿಡುವಾಗ ಎಲ್ಲರೂ ಗಣಪತಿಗೆ ಜಯಕಾರವನ್ನು ಹಾಕುತ್ತಾರೆ. ಹಾಗೂ ಬಿಡುವಾಗ ಸೇರಿದವರಿಗೆಲ್ಲಾ ಮೊಸರನ್ನ, ಹುಳಿಯನ್ನು ಪ್ರಸಾದ ಕೊಡುತ್ತಾರೆ.

**ಮಹಾಲಯ ಅಮಾವಾಸ್ಯೆ:**

ಸತ್ತ ಪಿತೃಗಳ ಸ್ಮರಣೆಗಾಗಿ ಮಹಾಲಯ ಅಮಾವಾಸ್ಯೆ ಆಚರಣೆಯಲ್ಲಿದೆ. ಇದನ್ನೇ ಮಾಲದ ಪಕ್ಷ, ಮಾಳದಹಬ್ಬ, ಪಿತೃಪಕ್ಷ ಎಂಬ ಪರ್ಯಾಯಪದಗಳಿವೆ. ಈ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಮಾಡುತ್ತಾರೆ. ಇದನ್ನು ಶೂದ್ರಾದಿಗಳು ಮಾಳಪಕ್ಷ ಎಂಬುದಾಗಿಯೂ ಬ್ರಾಹ್ಮಣರು ಪಿತೃಪಕ್ಷ ಎಂಬುದಾಗಿ ಈ ಹಬ್ಬವನ್ನು ಕರೆಯುತ್ತಾರೆ. ಅಕ್ಟೋಬರ್ ತಿಂಗಳಲ್ಲಿ ಬರುವ ಮಹಾಲಯ ಅಮಾವಾಸ್ಯೆಯ ದಿವಸ ಆಚರಿಸುತ್ತಾರೆ. ಈ ಹಬ್ಬ ಹಿರಿಯರಿಗೆ ಅನ್ನ, ನೀರು ಮತ್ತು ತರ್ಪಣ ಮಾಡುವುದಾಗಿರುತ್ತದೆ. ಎಷ್ಟೇ ಬಡವನಾಗಿದ್ದರೂ ಪಿತೃಪಕ್ಷವನ್ನು ಮಾಡಬೇಕು ಎಂಬುದಕ್ಕೆ 'ಮನೆ ಮಾರಿ ಆದರೂ ಮಾಳ ಮಾಡು', 'ಮಗನ್ನ ಮಾರಿಯಾದರೂ ಮಾಳ ಮಾಡು' ಎಂಬ ಗಾದೆಗಳಿವೆ. ಈ ಹಬ್ಬದಲ್ಲಿ ಹಿರಿಯರಿಗೆ ಎಡೆ ಇಡುವವರು ಆಚರಿಸುತ್ತಾರೆ. ಈ ಹಬ್ಬ ಮಾಡುವ ಮುಂಚೆ ಮನೆಯನ್ನು ಶುಚಿಗೊಳಿಸಿ ಸುಣ್ಣಬಣ್ಣ ತುಂಬಿ ಮನೆಮಂದಿಗೆಲ್ಲಾ ಹೊಸಬಟ್ಟೆಯನ್ನು ತಂದು ಪಿತೃಗಳಿಗೆ ಎಡೆ ಇಡಲು ಹೊಸ ಪಂಚೆ ಸೀರೆ ಎಲ್ಲವನ್ನು ತರುತ್ತಾರೆ. ಮಡಿಯಿಂದಲೇ ಹಿರಿಯರು ಏನೇನು ತಿಂಡಿ

ತೀರ್ಥ ತಿನ್ನುತ್ತಿದ್ದರೋ ಅದನ್ನೆಲ್ಲಾ ಯಾವುದನ್ನು ಬಿಡದಂತೆ ತಿಂಡಿಯತ್ತ ತಯಾರಿಸುತ್ತಾರೆ.

ಹಬ್ಬದಲ್ಲಿ ವಿಶೇಷ ತಿಂಡಿಯಾಗಿ ವಡೆ, ಚಕ್ಕುಲಿ, ನಿಪ್ಪಟ್ಟು, ಮುಸ್ಲೋರೆ, ಸಿಹಿಹಪ್ಪಳ, ರವೆಉಂಡೆ, ಕರ್ಜಿಕಾಯಿ, ಕಜ್ಜಾಯ, ಒಬ್ಬಟ್ಟು, ಕೋಡುಬಳೆ ಮುಂತಾದವುಗಳನ್ನು ಮಾಡುತ್ತಾರೆ. ತಿಂಡಿಯನ್ನು ಪಿತೃವಿನ ಎಡೆಗೆ ಇಡುವಷ್ಟು ಮಾತ್ರ ಮಾಡುವುದಿಲ್ಲ. ನೆಂಟರಿಷ್ಟರಿಗೆ, ಮಕ್ಕಳು ಮರಿ, ಬಂಧುಬಳಗದವರಿಗೆ, ಆಳುಕಾಳುಗಳಿಗೆ ಕೊಡುವಷ್ಟನ್ನು ಹಬ್ಬ ಮೂರು ನಾಲ್ಕು ದಿನಗಳು ಇರಬೇಕಾದಾಗಿನಿಂದಲೇ ತಯಾರಿಸುತ್ತಾರೆ. ಎಡೆಗೆ ಮಾಡಿದ ತಿಂಡಿಗಳನ್ನು ಎಂಜಲೂ ಮಾಡುವಹಾಗಿಲ್ಲ. ಮಕ್ಕಳಿಗೆ ಕೊಡಬೇಕಾದರೆ ಎಡೆಗೆಂದೇ ಪ್ರತ್ಯೇಕವಾಗಿ ಎತ್ತಿಟ್ಟ ಅನಂತರ ಕೊಡುತ್ತಾರೆ. ಎಂಜಲು ಮಾಡಿನ ತಿಂಡಿಗಳನ್ನು ಹಿರಿಯರ ಎಡೆಗೆ ಇಡಬಾರದು ಎಂಬ ನಂಬಿಕೆಯಿದೆ. ಎಡೆ ಇಡುವ ಹೆಂಗಸರು ಅಥವಾ ಗಂಡಸರು ಉಪವಾಸವಿದ್ದು ಎಡೆ ಇಡುತ್ತಾರೆ. ಒಕ್ಕಲಿಗರಲ್ಲಿ ಸಾಮಾನ್ಯವಾಗಿ ಸಿಹಿ ಅಡುಗೆಯನ್ನ ಮಾಡಿದರೆ ಉಳಿದ ಸಮುದಾಯಗಳಲ್ಲಿ ಮಾಂಸಾಹಾರವನ್ನು ಎಡೆಗೆ ಇಡುತ್ತಾರೆ. ಎಡೆಗೆ ತಿಂಡಿಗಳ ಜತೆಗೆ ಕುಂಬಳಕಾಯಿ ಪಲ್ಯ, ಹುಳಿಯನ್ನ, ಕಡಲೆಕಾಳು ಪಲ್ಯ, ಚಕ್ಕುಲಿ, ಮಸಾಲೆ ವಡೆ ಮುಂತಾದವುಗಳ ಜತೆಗೆ ಬೀಡಿ, ಸಿಗರೇಟು, ಮಧ್ಯಪಾನವನ್ನು ಎಡೆಗೆ ಇಡುತ್ತಾರೆ. ಹಾಗೂ ಪಂಚೆ, ಶಾಲು ಮೊದಲಾದ ವಸ್ತ್ರಗಳನ್ನು ಸಹ ಇಡುತ್ತಾರೆ. ಒಂದು ಹಿತ್ತಾಳೆ ಚೊಂಬಿಗೆ ವೀಳ್ಯದೆಲೆ ಹಾಕಿ ಹೊಂಬಾಳೆಯನ್ನು ಸಿಕ್ಕಿಸಿರುತ್ತಾರೆ. ಅದರ ಮೇಲೆ ಆ ವರ್ಷ ಹಬ್ಬಕ್ಕೆ ತಂದ ಹೊಸ ಬಟ್ಟೆಯನ್ನು ಇಡುತ್ತಾರೆ. ಪಕ್ಕದಲ್ಲೇ ಎಳನೀರಿನ ಬುರುಡೆಯನ್ನು ತೂತುಮಾಡಿ ಇಡುತ್ತಾರೆ. ಅದರ ಮುಂದೆ ಮೂರು ಅಥವಾ ಐದು ಮೊನೆ ಎಲೆಯನ್ನು ಹಾಸಿ ಆ ದಿನ ಮನೆಯಲ್ಲಿ ಮಾಡಿದ ಎಲ್ಲಾ ಅಡುಗೆಯನ್ನು ಬಡಿಸುತ್ತಾರೆ. ಹೀಗೆ ಮನೆಯ ಒಳಗೆ ಎಡೆ ಇಡುತ್ತಾರೆ. ಕಾಗೆಗಾಗಿ (ಹಿರಿಯರಿಗೆ) ಎಂದು ಮನೆಯ ಮೇಲೆ ಎಡೆಯನ್ನು ಇಡಲು ಒಂದು ಮರಕ್ಕೆ ಮನೆ ಬಾಳೆದೆಲೆ ಹಾಸಿ ಅದಕ್ಕೂ ಎಡೆ ಹಾಕಿ ಅದನ್ನು ಮನೆ ಮೇಲಿನ ಹಂಚಿನ ಮೆಲಕ್ಕೆ ಇಟ್ಟು ದೀಪ ಹಚ್ಚಿ ಅದನ್ನು ಪೂಜೆ ಮಾಡಿ ಧೂಪವನ್ನು ಹಾಕುತ್ತಾರೆ. ಪೂಜೆ ಮಾಡುವ ಸಮಯದಲ್ಲಿ ಹಿರಿಯರು ಸ್ವರ್ಗದ ಬಾಗಿಲು ತೆಗೆಸಿಕೊಂಡು ಬಂದು ಊಟ ಮಾಡಿ ಹೋಗುತ್ತಾರೆಂದು ನಂಬಿಕೆಯಿದೆ. ಆದ್ದರಿಂದ ಎಲ್ಲರೂ ಬೇಗ ಪೂಜೆ ಮಾಡಿ ಹೊರಗೆ ಬರುತ್ತಾರೆ. ಆಗ ಮನೆಯ ಒಳಗಡೆ ಯಾರು ಇರುವುದಿಲ್ಲ. ಹೊರಗಡೆ ಹೆಂಚಿನ ಮೆಲೆ ಇಟ್ಟು ಎಡೆಗೂ ಪೂಜೆ ಮಾಡುತ್ತಾರೆ. ಅಲ್ಲಿಗೆ ಸತ್ತವರು ಕಾಗೆ ರೂಪದಲ್ಲಿ ಬರುತ್ತಾರೆ ಎಂಬ ನಂಬಿಕೆಯಿದೆ. ಕಾಗೆ ಎಡೆ ಮುಟ್ಟದಿದ್ದರೆ ಆಚರಿಸಿದ ಹಬ್ಬದಲ್ಲಿ ಎಲ್ಲಿಯೋ ಮೈಲಿಗೆಯಾಗಿದೆ ಎಂಬ ನಂಬಿಕೆಯಿದ್ದು, ಮುಟ್ಟಿದರೆ,

ತಿಂದರೆ ಒಳ್ಳೆಯದೆಂದು ನಂಬುತ್ತಾರೆ. ಅನಂತರ ಒಳಗೆ ಹೋಗುವ ಸಮಯದಲ್ಲಿ ಬಾಗಿಲು ತಟ್ಟಿ ಶಬ್ದಮಾಡಿ ಒಳಗೆ ಹೋಗುತ್ತಾರೆ. ಕಾರಣ ನಾವು ಒಳಗೆ ಬರುತ್ತೇವೆ ತಾವು ನಮ್ಮಿಂದ ಮರೆಯಾಗಿ ಎಂಬ ಭಾವನೆಯಿದೆ ಎಂದು ಹಿರಿಕರು ತಿಳಿಸುತ್ತಾರೆ. ಅನಂತರ ನೆಂಟರಿಷ್ಟರೆಲ್ಲರೂ ಒಟ್ಟಿಗೆ ಸೇರಿ ಊಟ ಮಾಡಿದ ಮೇಲೆ ಮನೆಯ ಜಗಲಿ ಮೆಲೆ ವರಾಂಡದಲ್ಲಿ ಕುಳಿತು ತಾಂಬೂಲ ಹಾಕಿಕೊಳ್ಳುತ್ತ ತಮ್ಮ ಅನುಭವದ ಮಾತುಗಳನ್ನು ಆಡಿ ಸಂತೋಷದಿಂದ ಕಾಲ ಕಳೆಯುತ್ತಾರೆ.

ಹಬ್ಬದ ಮಾರನೆಯದಿನ ಮಾಂಸದ ಅಡುಗೆ ವಿಶೇಷವಾಗಿ ಮಾಡುವುದು ಕಂಡುಬರುತ್ತದೆ. ಈ ದಿನವನ್ನು ವರ್ಷದತೊಡುಕು ಎಂದು ಹೇಳುತ್ತಾರೆ. ಇದು ಮುಗಿದ ಮೇಲೆ ಬಂದ ನೆಂಟರು ಊರಿಗೆ ಹೋಗುವಾಗ ಅವರಿಗೆ ಮಾಂಸದ ಸಾರು, ತಿಂಡಿಗಳನ್ನು ಕೊಡುವುದು ಪದ್ಧತಿ ಇದೆ. ಬ್ರಾಹ್ಮಣರಲ್ಲಿ ಪಿತೃಪಕ್ಷದ ದಿವಸ ಮೊದಲು ಸ್ವರ್ಗಸ್ಥ ತಂದೆತಾಯಿಗಳಿಗೆ ಮುಕ್ತಿ ಪ್ರಾಪ್ತಕ್ಕಾಗಿ ತರ್ಪಣ ನಿಡುವ ದಿನ ತರ್ಪಣ ಬಿಡುವಾಗಲೆಲ್ಲಾ ಸತ್ತ ಹಿರಿಯರ ಹೆಸರನ್ನು ಮತ್ತು ಗೋತ್ರವನ್ನು ಬಾಯಿಂದ ಹೇಳಿ ಎಳ್ಳು ಮತ್ತು ಚಿಲ್ಲರೆ ಕಾಸನ್ನು ಬಿಡುತ್ತಾರೆ. ಹೀಗೆ ಮಾಡಿದರೆ ಹಿರಿಯರಿಗೆ ಸದ್ಗತಿ ದೊರೆಯುವುದೆಂಬ ನಂಬಿಕೆ ಇದೆ. ಪಿತೃಪಕ್ಷ ಮಾಡಲು ಸಾಧ್ಯವಿಲ್ಲದವರು ತರ್ಪಣವನ್ನಾದರೂ ಹಬ್ಬದಲ್ಲಿ ಬಿಡುತ್ತಾರೆ.



**ಆಯುಧ ಪೂಜೆ:** ನವರಾತ್ರಿಯಲ್ಲಿ ಬರುವ ನವಮಿಯನ್ನು ಆಯಧ ಪೂಜೆಯ ದಿನವಾಗಿ ಆಚರಿಸುತ್ತಾರೆ. ಈ ಹಬ್ಬವನ್ನು ಎಲ್ಲಾ ಜಾತಿ ಸಮುದಾಯದವರು ತಮ್ಮ ಧರ್ಮಕ್ಕೆ ಅನುಗುಣವಾಗಿ ಆಚರಿಸುತ್ತಾರೆ. ಈ ದಿನ ಬ್ರಾಹ್ಮಣರು ಪೆನ್ನು ಪುಸ್ತಕ ಪೂಜಿಸುವುದು ರೂಢಿಯಲ್ಲಿದೆ. ಒಟ್ಟಿನಲ್ಲಿ ಈ ದಿನ ಉಪಕರಣ ಸಾಮಾಗ್ರಿಗೆಲ್ಲಾ ಪೂಜೆ ನಡೆಯುತ್ತದೆ. ಆಯುಧ ಪೂಜೆಯ ಉಪಕರಣ ಸಂಸ್ಕೃತಿಗೆ ಸಂಬಂಧಿಸಿದ ಹಬ್ಬ. ಗ್ರಾಮದಲ್ಲಿ ಓಡಾಡುವ ಗಾಡಿ, ಬಸ್ಸು, ಲಾರಿ, ಕಾರು, ಮನೆ ಬಳಕೆಯ ಉಪಕರಣಗಳಾದ ಕುಡ್ಲು, ಕತ್ತಿ, ಮಚ್ಚು, ಕತ್ತಿಮಣೆ, ಆಧುನಿಕ ಉಪಕರಣಗಳು ಗ್ಯಾಸ್, ಮಿಕ್ಸಿ, ದೂರದರ್ಶನ, ಗಡಿಯಾರ, ರೇಡಿಯೋ, ಬಿರು, ವ್ಯವಸಾಯ ಸಂಬಂಧ ಉಪಕರಣಗಳು ಮೊದಲಾದವುಗಳನ್ನೆಲ್ಲಾ ನೀರಿನಲ್ಲಿ ತೊಳೆದು ನಡುಮನೆಯಲ್ಲಿ ಸಾಲಾಗಿ ಇಡಲಾಗುವುದು. ಅವುಗಳಿಗೆ ವಿಭೂತಿ, ಕುಂಕುಮವಿನ್ನಿಟ್ಟು ಅವುಗಳಿಗೆ ಯಾವ ಅಪಾಯ ಆಗದಿರಲೆಂದು ಪೂಜಿಸಿ ನಿಂಬೆಹಣ್ಣು, ಬೂದುಗುಂಬಳಕಾಯಿ ಒಡೆದು ಪೂಜೆ ಮಾಡುತ್ತಾರೆ. ಅಲ್ಲದೆ ಭತ್ತದ ಗಿರಣಿ, ರಾಗಿಗಿರಣಿ, ಅಂಗಡಿಗಳು, ಬಟ್ಟೆಯನ್ನು ಹೊಲೆಯುವ ಯಂತ್ರ ಇತರ ಕಸುಬುಗಳಲ್ಲಿ ಬಳಕೆಯಾಗುವ ಸಲಕರಣೆಗಳು ಈ ಹಬ್ಬದಲ್ಲಿ ಪೂಜೆಗೊಳ್ಳುವುವು. ಇವನ್ನು ಪೂಜಿಸಿದ ಮೇಲೆ ಬಂದ ಜನರಿಗೆ ಸಿಹಿ ಹಂಚುವರು. ಸಂಜೆಯ ಸಮಯಕ್ಕೆ ಕೋಳಿ, ಕುರಿಯನ್ನು

ಆಯುಧಗಳಿಗೆ ಬಲಿಕೊಟ್ಟು ಅದರ ರಕ್ತವನ್ನು ಉಪಕರಣಗಳಿಗೆ ಹಚ್ಚಿ ಅವುಗಳಿಂದ ಆಗುವ ಕೆಲಸವನ್ನು ಆರಂಭಿಸುವರು. ಶಿಷ್ಟರು ಸಾಮಾನ್ಯವಾಗಿ ಪ್ರಾಣಿ ಬಲಿಗೆ ಪ್ರತಿಯಾಗಿ ಬೂದಗುಂಬಳ, ನಿಂಬೆಹಣ್ಣು, ಕಾಯಿಯನ್ನು ಬಲಿಯಾಗಿ ಕೊಡುವುದು ಹೆಚ್ಚು ಬಳಕೆಯಲ್ಲಿದೆ. ಆಯುಧ ಪೂಜೆಯನ್ನು ಅಗಸರು ವಿಶೇಷವಾಗಿ ಆಚರಿಸುತ್ತಾರೆ. ಈ ದಿನ ಅಗಸರು ಉಬ್ಬೆ ಹೊಲೆಯನ್ನು ಪೂಜೆ ಮಾಡಿ ಅದಕ್ಕೆ ಕುರಿ, ಕೋಳಿ ಬಲಿಕೊಟ್ಟು ಬಟ್ಟೆಯನ್ನು ಉಬ್ಬೆಗೆ ಹಾಕುತ್ತಾರೆ. ಈ ದಿನ ಮಾಂಸಾಹಾರಿಗಳು ಮಾಂಸಾಹಾರವನ್ನು, ಸಸ್ಯಾಹಾರಿಗಳು ಸಸ್ಯಾಹಾರವನ್ನು ಸೇವಿಸುವುದು ಕಂಡುಬರುತ್ತದೆ.

**ದೀಪಾವಳಿ:** ದೀಪಾವಳಿ ಎಂದರೆ ಎಲ್ಲರಿಗೂ ಹರ್ಷದ ಹೊನಲು ಹರಿಸುವ ಬೆಳಕಿನ ಹಬ್ಬ. ಶಿಷ್ಟರೆಲ್ಲ ಅಭ್ಯಂಜನ ಸ್ನಾನ, ದೇವರ ಪೂಜೆ, ಹೊಸಬಟ್ಟೆ, ಮಗಳು ಅಳಿಯನಿಗೆ ವಿಶೇಷ ಆದರಾತಿಥ್ಯ ಉತ್ಸಾಹ ಮೂಡಿಸುವುದೇ ಈ ಹಬ್ಬದ ವೈಶಿಷ್ಟ್ಯ. ದೀಪಾವಳಿಯು ಹಬ್ಬದ ಆಶಯ ಒಂದೇ ಆಗಿದ್ದರು ಆಚರನೆಯಲ್ಲಿ ವಿವಿಧತೆ ಇದೆ. ಶಿಷ್ಟರಲ್ಲಿ ನರಕ ಚತುರ್ಥ, ಅಮಾವಾಸ್ಯೆ, ಬಲಿಪಾಡ್ಯಮಿ ಎಂದು ಆಚರಿಸುವರು. ಜನಪದರಿಗೆ ದೀಪಾವಳಿ ಒಂದು ದಿನದ ಹಬ್ಬ. ನರಕಚತುರ್ಥಿಯನ್ನು ನರಕಾಸುರ ವಧೆಯಾದ ದಿನದಂದು ಆತನನ್ನು ಕೊಂದ ಹರಿಯನ್ನು ಸ್ಮರಣೆ ಮಾಡಿಕೊಳ್ಳುವ ದಿನ. ಇಂದು ತಮಗೆ ಇಷ್ಟವಾದ ಅಡಿಗೆಯೊಂದಿಗೆ ಹಬ್ಬ ಆಚರನೆ ಮಾಡುತ್ತಾರೆ. ಯಾವುದೇ ವಿಶೇಷ ಪೂಜೆ ಇಲ್ಲ. ಇದರ ಮರುದಿನವೇ ಅಮಾವಾಸ್ಯೆಯೆಂದು ಧನಲಕ್ಷ್ಮಿ ಪೂಜೆ, ಈ ದಿನ ಧನವನ್ನು ಇಟ್ಟು ಮುತ್ತೈದೆಯರು ತಮ್ಮ ಪತಿಯ ಸಿರಿಸಂಪತ್ತು ಅಭಿವೃದ್ಧಿಯಾಗಲಿ ಎಂಬ ಉದ್ದೇಶದಿಂದ ಈ ಹಬ್ಬ ಆಚರಣೆ ಮಾಡುತ್ತಾರೆ. ಹೆಣ್ಣು ಮಕ್ಕಳು ರಂಗೋಲಿ ಬಿಟ್ಟು ದೀಪಾಲಂಕಾರವನ್ನು ಮಾಡುವರು. ಗಂಡು ಮಕ್ಕಳು ಪಟಾಕಿಯನ್ನು ಹೊಡೆಯುತ್ತಾರೆ. ಲಕ್ಷ್ಮೀಪೂಜೆಗೆ ಹೆಚ್ಚು ಮಹತ್ವಕೊಟ್ಟಿದ್ದ ಧಾನ್ಯಲಕ್ಷ್ಮೀ ಮತ್ತು ಧನಲಕ್ಷ್ಮೀ ಮನೆಗೆ ಬರುವ ದಿನದಂದು ಈ ದಿನ ಸಂಜೆಯ ಸಮಯದಲ್ಲಿ ಮನೆಯ ಬಾಗಿಲನ್ನು ತೆರೆದಿಡುತ್ತಾರೆ. ಅಂಗಡಿಯವರು ಮಳಿಗೆಗಲ ಮುಂದೆ ತಳಿರುತೋರಣ ಕಟ್ಟಿ ವ್ಯವಹಾರಕ್ಕೆ ಶುಭ ದಿನವೆಂದು ಭಾವಿಸುತ್ತಾರೆ. ಈ ದಿನ ಲಾಭನಷ್ಟ ಲೆಕ್ಕ ಹಾಕಿ ಬಂಧು ಮಿತ್ರರಿಗೆ ಸಿಹಿ ಪದಾರ್ಥಗಳನ್ನು ಹಂಚಿ ಶುಭಕೋರುವವರು.

ಬಲಿ ಪಾಡ್ಯಮಿ ಹಬ್ಬದ ದಿನವನ್ನು ವಾಮನರೂಪಿ ಶ್ರೀ ವಿಷ್ಣು ತ್ರಿವಿಕ್ರಮನಾಗಿ ಬಲೀಂದ್ರನನ್ನು ಪಾತಾಳಕ್ಕೆ ತುಳಿದ ದಿನ. ಈ ದಿನ ಬಲೀಂದ್ರ ಭೂಮಿಗೆ ಬರುತ್ತಾನೆ ಎಂಬ ನಂಬಿಕೆಯೇ ಬಲಿ ಪಾಡ್ಯಮಿ ಆಚರಣೆಯ ಮೂಲ. ಆದ್ದರಿಂದ ಈ ದಿನದಂದು ಹೊಸ್ತಿಲು, ಅಡಿಗೆ ಮನೆ, ಕೊಟ್ಟಿಗೆ ಮುಂತಾದ ಕತೆಗಳಲ್ಲೆಲ್ಲಾ ಸ್ವಚ್ಛವಾಗಿ ರಂಗೋಲಿ ಹಾಕಿ ಬಲೀಂದ್ರನನ್ನು ಸ್ಥಾಪಿಸಿ ಹೊಲಗದ್ದೆಗಳಲ್ಲಿಯೇ ಉತ್ರಾಣಿ,

ಚೆಂಡುಹೂ, ಹುಚ್ಚೆಳ್ಳುಹೂ, ಕುಂಬಳದ ಹೂ, ಸೇವಂತಿಗೆ ಹೂ, ಅದಕ್ಕೆ ಏರಿಸಿ ಅದರ ಸುತ್ತ ಐದು ತರದ ಬೂದಿಯನ್ನು ರಂಗೋಲಿಗೆ ಬೆರಸಿ ಐದು ಕಡೆಗೆ ಹಸೆ ಬಿಟ್ಟು ಪೂಜೆ ಮಾಡಿ ಗಂಧದ ಕಡ್ಡಿ ಬೆಳಗುತ್ತಾನೆ.

ದೀಪಾವಳಿ ಶಿಷ್ಟರಿಗೆ ಸಂತೋಷ ಹಬ್ಬವಾದರೆ ಜನಪದರಿಗೆ ವ್ಯವಸಾಯ ಮತ್ತು ಪಶುಪಾಲನೆಗೆ ಸಂಬಂಧಿಸಿದ ಹಬ್ಬವಾಗಿದೆ. ಜನಪದರಿಗೆ ಬಲಿ ಪಾಡ್ಯಮಿಯ ದಿವಸವೇ ದೀಪಾವಳಿ ಆಚರಣೆ. ಈ ದಿನ ಹೆಂಗಸರು ಮನೆ ಮಠಗಳನ್ನು ನೀರಿನಲ್ಲಿ ತೊಳೆದು ಪಾತ್ರೆಗಳನ್ನೆಲ್ಲಾ ಬೆಳಗಿ, ಬಾವಿ, ಮನೆ ಮುಂದೆ ಬಾಗಿಲನ್ನೆಲ್ಲಾ ಸಗಣಿಯ ಉಂಡೆ ಮಾಡಿ ಇಟ್ಟು ಅದಕ್ಕೆ ಚಂಡು ಹೂವು ಅಥವಾ ಸೇವಂತಿಗೆ ಹೂವು ಹುಚ್ಚೆಳ್ಳುಹೂವು, ಸಿಕ್ಕಿಸಿ ಹೂವಿನಿಂದಲೇ ಮನೆಯನ್ನು ಅಲಂಕರಿಸುತ್ತಾರೆ. ದನಕರುಗಳನ್ನೆಲ್ಲಾ ಮೇಯಲು ಹೊಲಗಳಿಗೆ ಸ್ವೇಚ್ಛೆಯಾಗಿ ಬಿಟ್ಟು ಬಿಡುತ್ತಾರೆ. ಅಂದು ದನಗಳಿಂದ ಯಾವುದೇ ರೀತಿಯ ಕೆಲಸವನ್ನು ಮಾಡಿಸುವುದಿಲ್ಲ. ಮನೆ ಮಂದಿಯೆಲ್ಲಾ ಸ್ನಾನ ಮಾಡಿ ಬಲೀಂದ್ರನನ್ನು ಪೂಜಿಸಿ ಅಡಿಗೆ ಮಾಡಿ ಇಡ್ಲಿ, ಚಟ್ನಿ, ಹೋಳಿಗೆ, ವಡೆ, ಅನ್ನಸಾರು, ಪಾಯಸ ಮಾಡಿ ಊಟ ಮಾಡುವರು. ಸಂಜೆ ಸಮಯಕ್ಕೆ ಮನೆಯ ಬಾಗಿಲು ಮುಂದೆ ಎರಡು ಸಗಣಿ ಉಂಡೆಗಳನ್ನಿಟ್ಟು ಚೆಮಡು ಹೂವು ಚುಚ್ಚಿ ಅದರ ಮೇಲೆ ಎರಡು ಹಣತೆ ಹಚ್ಚಿಟ್ಟು ಗೋವಿನ ಪೂಜೆ ಮಾಡುತ್ತಾರೆ. ರೈತನ ಪಲಿನ ದೈವಗಳೆಂದರೆ ಭೂಮಿಗಳನ್ನು ಉತ್ತುಕೊಡುವ ಎತ್ತುಗಳು, ರೈತನ ಪಾಲಿಗೆ ಅವು ಕೇವಲ ಪ್ರಾಣಿಗಳಲ್ಲ, ಅವನು ಗ್ರಾಮೀಣ ಜೀವನದಲ್ಲಿ ತಮ್ಮ ಮಕ್ಕಳು ಮರಿಗಳಿಗೆ ತೋರಿಸುವಷ್ಟೇ ಪ್ರೀತಿ ವಾತ್ಸಲ್ಯವನ್ನು ಜಾನುವಾರುಗಳಿಗೂ ತೋರಿಸುತ್ತಾರೆ. 'ಎತ್ತಿಲ್ಲದವನಿಗೆ ಎದೆಯಿಲ್ಲ' ಎಂಬ ಗಾದೆಯಿದೆ. ತಾಯಿಯ ಹಾಲಿಗೆ ಎಷ್ಟೇ ಪ್ರಾಮುಖ್ಯತೆಯೋ ಅಷ್ಟೇ ಗೋವಿನ ಹಾಲಿಗಿದೆ. ಸಂಜೆಗೆ ಮನೆಯಲ್ಲಿ ಎತ್ತಿನಗಾಡಿ, ನೇಗಿಲು, ನೊಗ ಮೊದಲಾದ ಉಪಕರಣಗಳ ಹತ್ತಿ ದೀಪಾಲೆ ಕಂಬಗಳನ್ನು ಹಚ್ಚಿ, ಬಾಳೆ ಎಲೆ ಇರಿಸಿ ಅದರ ಮೇಲೆ ಬಾಳೆಹಣ್ಣು, ಕಾಯಿ, ಮಾಡಿದ ಸಿಹಿ ತಿಂಡಿ ಇಟ್ಟು ಪೂಜೆ ಮಾಡಿ ದನಗಳ ಮುಖಕ್ಕೆ ದೀಪ ಹಿಡಿದು 'ಬೆಳಕು ನೋಡು ಹಬ್ಬ ಮಾಡು' ಎಂದು ಹೇಳಿ ಪೂಜೆಗೊಂಡು ದನಕರುಗಳಿಗೆ ಬಾಳೆಹಣ್ಣು ಕಡುಬು ಒಬ್ಬಟ್ಟನ್ನು ತಿನ್ನಿಸುತ್ತಾರೆ. ಅವುಗಳ ಕಾಲಿಗೆ ನಮಸ್ಕಾರ ಮಾಡುತ್ತಾರೆ. 'ದೀಪಾವಳಿಯಲ್ಲಿ ದನ ಕೆಣಕಬೇಡ, ನುಗ್ಗೀಲಿ ಜನ ಕೆಣಕ ಬೇಡ' ಎಂಬ ಗಾದೆಯಿದೆ. ಈ ಸಮಯದಲ್ಲಿ ದನಕರುಗಳು ಸದೃಢವಾಗಿ ಬೆಳೆದಿತ್ತು.

**ನಾಗರಪಂಚಮಿ:** ನಾಗರಪಂಚಮಿಯಂದು ಹೆಂಗಳೆಯರು ನಸುಕಿನಲ್ಲಿಯೇ ಎದ್ದು ಹೇಮಾವತಿ ನದಿಯಲ್ಲಿ ಸ್ನಾನ ಮಾಡಿ, ಮಡಿಯೊಂದಿಗೆ ನಾಗಪ್ಪನಿಗೆ ತನಿ ಎರೆಯುವುದೇ ಈ ಹಬ್ಬದ ವಿಶೇಷ. ಹಬ್ಬದ ದಿನ ಹೇಮಾವತಿ ನದಿ ಸನಿಹದಲ್ಲಿರುವ

ಹುತ್ತಕ್ಕೆ ನೇಮದಿಂದ ನಾಗಪ್ಪನ ಪೂಜೆಯನ್ನು ಮಾಡುವರು. ಹಸಿನೂಲು, ಹಸುವಿನ ಹಾಲು, ತುಪ್ಪ, ಸಕ್ಕರೆ, ತಂಬಿಟ್ಟು ಕೊಬ್ಬರಿ ಬೆಲ್ಲ, ಹಸಿಕಡಲೆಕಾಳು, ಬಾಳೆಹಣ್ಣು, ಕೆಂಪುಹೂ, ಸುವಾಸನೆಭರಿತ ಹೂಗಳನ್ನು ಪೂಜೆಗೆ ಇಡುವರು. ಹುತ್ತವನ್ನು ಹದಿನಾರು ಸುತ್ತು ಪ್ರದಕ್ಷಿಣೆ ಹಕಿ ಹುತ್ತಕ್ಕೆ ಹಾಲೆರೆಯುವರು. ಪೂಜೆ ನೈವೇದ್ಯ ಮಂಗಳಾರತಿಯ ಅನಂತರ ಹುತ್ತದ ಮಣ್ಣನ್ನು ತೀರ್ಥದೊಡನೆ ತೆಗೆದುಕೊಳ್ಳುವರು. ಇದರಿಂದ ಯಾವುದೇ ಕಜ್ಜಿತುರಿ ಮುಂತಾದ ಚರ್ಮದ ಕಾಯಿಲೆ ಬರುವುದಿಲ್ಲ ಎಂಬ ನಂಬಿಕೆಯಿದೆ. ಎಲ್ಲಾ ಜಾತಿಯವರು ನಾಗರಪಂಚಮಿಯನ್ನು ಆಚರಿಸುತ್ತಾರೆ. ಪಂಚಮಿ ಹಬ್ಬದ ಪೂಜೆಗೆ ಹೋಗುವ ನೆನೆ ಅಕ್ಕಿ, ನೆಲಗಡಲೆ, ಗೊನೆ ಬಾಳೆಹಣ್ಣು, ಹುರಿಗಡಲೆ, ಚಿಗಳಿ, ತಂಬಿಟ್ಟು ಉಂಡೆ ಕಟ್ಟಿ ನಾಗಪ್ಪನಿಗೆ ತನಿ ಎರೆಯುತ್ತಾರೆ. ನಾಗರ ಪಂಚಮಿಯ ದಿನದಂದು ಹುತ್ತವನ್ನು ಹುಡುಕಿಕೊಂಡು ಹೋಗಿ ಹಾಲು, ಜೇನುತುಪ್ಪ ಬೆರಸಿ ತನಿ ಎರೆಯುವರು ನಾಗ ಪೂಜೆಯಿಂದ ಸರ್ಪ ವಿಮೋಚನೆ ಆಗುತ್ತದೆ ಎಂಬ ನಂಬಿಕೆಯಿದೆ ಹಾಗೂ ಮಕ್ಕಳಿಲ್ಲದವರಿಗೆ ಮಕ್ಕಳಾಗುತ್ತದೆ ಎಂಬ ನಂಬಿಕೆಯೂ ಇದೆ.

**ಸಂಕ್ರಾಂತಿ:** ಹೊಸ ವರ್ಷದ ಪಂಚಾಂಗದ ಪ್ರಕಾರ ವರ್ಷದ ಪ್ರಾರಂಭದಲ್ಲಿ ಜನವರಿ ೧೪ರಂದು ಅಪರೂಪಕ್ಕೆ ೧೫ರಂದು ಸಂಕ್ರಾಂತಿ ಹಬ್ಬ ಬರುವುದುಂಟು. ಇದು ಸುಗ್ಗಿಯ ಮೊದಲ ಹಬ್ಬ. ಇದನ್ನು ಸೂರ್ಯ ಆರಾಧನೆ ಹಬ್ಬ, ಎಳ್ಳು ಬೀರುವ ಹಬ್ಬ, ಮಕ್ಕಳ ಹಬ್ಬ, ಗೋಪೂಜೆ, ರಾಶಿ ಮಾಡುವ ಹಬ್ಬ ಎಂದು ಕರೆಯುತ್ತಾರೆ. ಬೆಳೆದ ಬೆಳೆಯನ್ನು ಮನೆ ತುಂಬಿಸಿಕೊಳ್ಳುವ ಕಲ ಸಂಕ್ರಾಂತಿ. ಆದ್ದರಿಂದಲೇ 'ದೀವಳಿಗೇಲಿ ದನ ಕೆಣಕಬೇಡ ನುಗ್ಗೀಲಿ ಜನ ಕೆಣಕಬೇಡ' ಎಂಬ ಗಾದೆಯಿದೆ. ಇದು ಸಮೃದ್ಧಿ, ಸಂತೃಪ್ತಿ, ಸುಗ್ಗಿ, ಸೌಂದರ್ಯ ತುಂಬಿದ ಕಾಲ. ಆದ್ದರಿಂದ ಸಂಕ್ರಾಂತಿಗೂ ಸುಗ್ಗಿಗೂ ಅವಿನಾಭಾವ ಸಂಬಂಧವಿದೆ. ಸಂಕ್ರಾಂತಿಲಿ ಸಂತೋಷ ಪಡದವರು ಯಾವ ಹಬ್ಬದಲ್ಲೂ ಸಂತೋಷ ಪಡಲಾರ ಎಂಬ ನಂಬಿಕೆ ಇದೆ.

ಸಂಕ್ರಾಂತಿಯ ದಿನವನ್ನು ಉತ್ತರಾಯಣ ಪುಣ್ಯಕಾಲವೆಂದು ಪರಿಗಣಿಸುತ್ತಾರೆ. ಸಂಕ್ರಾಂತಿಯ ದಿನದಂದು ಇದೇ ಗ್ರಾಮದಲ್ಲಿ ಶ್ರೀರಂಗನಾಥ ಸ್ವಾಮಿ ಜಾತ್ರೆಯು ಜರುಗುತ್ತದೆ. ಅಂದು ಪೂಜೆ, ಜಪತಪ, ದಾನ, ಧರ್ಮ, ಪಿತೃತರ್ಪಣಾದಿಗಳು ವಿಶೇಷ ಪುಣ್ಯಫಲವನ್ನು ಕೊಡುತ್ತಿದೆ ಎಂಬ ನಂಬಿಕೆಯಿದೆ. ಸಂಕ್ರಾಂತಿಯಂದು ಸ್ವರ್ಗದ ಬಾಗಿಲು ತೆರೆದಿಡುತ್ತದೆ. ಈ ಸಂದರ್ಭದಲ್ಲಿ ಸತ್ತವರಿಗೆ ಸ್ವರ್ಗಪ್ರಾಪ್ತಿ ಎಂಬ ನಂಬಿಕೆಯು ಗ್ರಾಮದಲ್ಲಿದೆ. ಹಬ್ಬದಮದು ದೇವರಿಗೆ ಎಳ್ಳುಬೆಲ್ಲ ನೈವೇದ್ಯ ಜತೆಗೆ ಬಾಳೆಹಣ್ಣು, ಕಬ್ಬನ್ನು ಅರ್ಪಿಸುತ್ತಾರೆ. ಬೆಟ್ಟದ ಮೇಲೆ ವಿಜೃಂಭಣೆಯಿಂದ ಜಾತ್ರೆ ಜರುಗುತ್ತದೆ. ಶ್ರೀರಂಗನಾಥಸ್ವಾಮಿ ಒಕ್ಕಲಿನವರೆಲ್ಲ ಈ ಜಾತ್ರೆಗೆ ಸೇರುತ್ತಾರೆ. ಹಾಗೂ ಪೂಜೆ ಮಾಡಿಸುತ್ತಾರೆ. ಕೆಲವರು ತಲೆಮುಡಿಯನ್ನು ಕೊಡುತ್ತಾರೆ.

ಸೂರ್ಯನು ಮಕರ ರಾಶಿಯಲ್ಲಿರುವಾಗ ಸುರ್‍ಯೋದಯಕ್ಕೆ ಸರಿಯಾಗಿ ಸ್ನಾನ ಮಾಡುವುದರಿಂದ ಸಕಲ ಪಾಪಗಳು ಪರಿಹಾರವಾಗುದೆಂಬ ನಂಬಿಕೆಯಿದೆ. ಅಂದರೆ ಹಳೆಯದನ್ನು ಬಿಟ್ಟು ಹೊಸದನ್ನು ಪ್ರವೇಶಿಸುವ ಶುಭದಿನ ಪುಣ್ಯದಿನ. ಸಂಕ್ರಾಂತಿ ಹಬ್ಬದಲ್ಲಿ ಸಂಕ್ರಮಣ ಹುಟ್ಟುವ ಹೊತ್ತಿಗೆ ಹೆಣ್ಣು ಮಕ್ಕಳು ಎಳ್ಳೆಣ್ಣೆ, ಮೈಗೆ ಹಚ್ಚಿಕೊಂಡು ಸ್ನಾನ ಮಾಡುತ್ತಾರೆ. ಅನಂತರ ಅಶ್ವತ್ಥ ಕಟ್ಟೆ ಸುತ್ತು ಪ್ರದಕ್ಷಿಣೆ ಹಾಕಿ ಪೂಜೆ ಮಾಡುವುದು ರೂಢಿಯಲ್ಲಿದೆ. ಹೆಣ್ಣು ಮಕ್ಕಳು ಹೊಸ ಬಟ್ಟೆ ತೊಟ್ಟು ಎಳ್ಳು ಬೀರುವ ಪದ್ಧತಿಯಿದೆ. ಜೊತೆಗೆ ಜನಪದರಲ್ಲಿಯೂ ಇತ್ತೀಚೆಗೆ ರೂಢಿಗೆ ಬಂದಿದೆ. ಸಂಜೆ ಎಳ್ಳು ಬಿಡುವ ಹಬ್ಬ ಸಂಕ್ರಾಂತಿ. ಇದು ಮಕ್ಕಳಿಗೆ ಹರ್ಷದಾಯಕ ಹಬ್ಬ. ಈ ದಿನದಂದು 'ಎಳ್ಳುಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡು" ಎಂದು ಗಾದೆ ಹೇಳುತ್ತಾರೆ. ಎಳ್ಳು ಬೀರುವುದರಿಂದ ಮುನಿಸು, ಮನಸ್ತಾಪ, ಹಳೆಯ ವೈಷಮ್ಯ ಮಾಯವಾಗಿ ಹೊಸ ಸ್ನೇಹ ಬಂಧುತ್ವ ಮೂಡಲೆಂದು ಎಳ್ಳಿನ ವಿನಿಮಯದಿಂದ ಒಳ್ಳೆಯ ಮಾತುಗಳನ್ನಾಡುವುದೇ ಈ ಎಳ್ಳು ಬೀರುವುದರ ಸಂಕೇತ. ಎಳ್ಳು ಇಲ್ಲಿ ಸ್ನೇಹ ಕಾಂತಿ, ಶಕ್ತಿಯ ಸಂಕೇತವಾದರೆ ಬೆಲ್ಲ ಪ್ರೀತಿ. ಆದ್ದರಿಂದ ಮಕರ ಸಂಕ್ರಾಂತಿಯ ದಿನ ಎಳ್ಳು ಬೆಲ್ಲ ಹಂಚುತ್ತಾ ಎಳ್ಳು ಬೆಲ್ಲ ತಿನ್ನುತ್ತಾ ಸಿಹಿಯಾಗಿ ಅಂದರೆ ಅಕ್ಕರೆಯಿಂದ ಒಬ್ಬರೊಡನೆ ಒಬ್ಬರು ಬಾಳೋಣ ಎಂದೆನ್ನುತ್ತಾರೆ. ಈ ದಿನ ಯಾರು ಉಪವಾಸವಿರಬಾರದು. ಯಾರನ್ನು ಉಪವಾಸವಿರುವಂತೆ ಮಾಡಬಾರದು ಹಾಗೆ ಮಾಡಿದರೆ ಅದು ಪಾಪ, ಈ ದಿನ ಭೂಮಿಯಲ್ಲಿ ಜನರು ನಕ್ಕರೆ ಭೂ ಲೋಕವೂ ಸ್ವರ್ಗವಾಗುತ್ತದೆ. ಜನರು ಅತ್ತೆ ದೇವಲೋಕವೂ ನರಕವಾಗುತ್ತದೆಂಬ ನಂಬಿಕೆಗಳಿವೆ. ಈ ದಿನದಂದು ಹಬ್ಬಕ್ಕೆ ತಿಂಡಿ-ತಿನಿಸು, ಎಳ್ಳಿನ ಉಂಡೆ, ಎಳ್ಳಿನ ಹೋಳಿಗೆ, ಜೊತೆಗೆ ಪಾಯಸ ಪೊಂಗಲ್ ಮಾಡುತ್ತಾರೆ. ಅಡಿಗೆ-ಉಡುಗೆ-ತೊಡುಗೆಗಳು ಸಂಭ್ರಮದಿಂದ ಸಂಕ್ರಾಂತಿಯಲ್ಲಿ ಶೋಭಿಸುತ್ತವೆ.

ಚಳಿಗಾಲದಲ್ಲಿ ಕಬ್ಬು ಶರೀರಕ್ಕೆ ಉಪಯುಕ್ತ ಮುಖದ ಕಾಂತಿ ಹೆಚ್ಚಿಸುತ್ತದೆ. ರಕ್ತ ದೋಷ ನಿವಾರಕ, ಪಿತ್ತ ಹಾಗೂ ಮೂರ್ಚೆರೋಗ ನಿವಾರಕವಾಗಿರುತ್ತದೆ. ಕಾಮಾಲೆ ರೋಗದವರಿಗೆ ಸಿದ್ಧ ಔಷಧವಾಗಿದೆ. ಎಳ್ಳು ತೇಜಸ್ಸು ಉತ್ಸಾಹ ಹಾಗೂ ಶಕ್ತಿ ನೀಡುವುದು. ಹುರಿಗಡಲೆ ನೆಗಡಿ, ಶೀತ, ಕಫ ನಿವರಕವಾದರೆ ಕಡಲೆಕಾಯಿ ಬೀಜ ರೋಗನಿರೋಧಕ ಶಕ್ತಿ ವರ್ಧಕವಾಗಿದೆ. ಕೊಬ್ಬರಿ ಚರ್ಮರೋಗ ನಿರೋಧಕ. ಈ ವಿದ್ಯಾರ್ಥಿಗಳನ್ನು ಹಿತಮಿತವಾಗಿ 'ಎಳ್ಳುಬೀರು'ಗಳ ಮೂಲಕ ಉಪಯೋಗಿಸಿದರೆ ಆರೋಗ್ಯಕ್ಕೆ ಒಳ್ಳೆಯದೆಂದು ಶಿಷ್ಟರು ಹೇಳುತ್ತಾರೆ.

**ಶಿವರಾತ್ರಿ:** ಶಿವರಾತ್ರಿಯನ್ನು ಮಹಾಶಿವರಾತ್ರಿಯೆಂದು ಕರೆಯುತ್ತಾರೆ. ಇದು ಮಾಘಮಾನದ ಬಹುಳ ಚತುರ್ಥಿಯಂದು ಬರುವ ಸಾಯಂಕಾಲದ ಹಬ್ಬ. ಶೈವರು

ಈ ಹಬ್ಬಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುತ್ತಾರೆ. ಈ ದಿನ ಭಕ್ತರು ಈಶ್ವರ ದೇವಸ್ಥಾನಕ್ಕೆ ಹೋಗಿ ಶಿವಲಿಂಗಕ್ಕೆ ಶ್ರದ್ಧಾ ಭಕ್ತಿಗಳಿಂದ ಪಂಚಾಮೃತ ಅಭಿಷೇಕ, ಎಳನೀರು ಅಭಿಷೇಕ ಮಾಡಿಸುತ್ತಾರೆ. ಬಿಲ್ವಪತ್ರೆ, ತುಂಬೆಹೂವು, ಕಮಲ, ದಾಸವಾಳ, ತುಳಸಿ, ನಂದಿಬಟ್ಟಲು, ಪಾದರಿಯ ಪವಿತ್ರ ಪುಷ್ಪಗಳಿಂದ ಅರ್ಚನೆ ಮಾಡುತ್ತಾರೆ. ಈ ದಿನ ಉಪವಾಸದ ಪ್ರಾರ್ಥನೆ, ಪ್ರಸಾದ, ಜಾಗರಣೆಗೆ ಹೆಚ್ಚು ಮಹತ್ವವಿದೆ. ಈ ದಿನ ಶಿವಲಿಂಗ ದರ್ಶನ ಮಾಡುವುದರಿಂದ ಸಕಲ ಭೋಗಭಾಗ್ಯ ದೊರೆಯುತ್ತವೆಯೆಂದು ಶಿವನನ್ನು ಸತತವಾಗಿ ಮನೆಯಲ್ಲಿ ದೇವಾಲಯದಲ್ಲಿ ಧ್ಯಾನಿಸುವುದು, ಜಪಿಸುವುದು ಭಕ್ತರಲ್ಲಿ ವಿಶೇಷ ರೀತಿಯಲ್ಲಿ ಕಂಡುಬರುತ್ತದೆ. ಶಿವಲಿಂಗವನ್ನು ಪ್ರದಕ್ಷಿಣೆ ಮಾಡುವವರಿಗೆ ಭೂಪ್ರದಕ್ಷಿಣೆ ಮಾಡಿ ಫಲ ದೊರೆಯುವುದೆಂಬ ನಂಬಿಕೆ.

ಈ ಹಬ್ಬವು ಉಪವಾಸದ ದೃಷ್ಟಿಯಿಂದ ಎಲ್ಲ ಹಬ್ಬಗಳಿಗಿಂತ ಭಿನ್ನವಾಗಿದೆ. ಉಪವಾಸ ಇರುವವರು ಬೇಲದ ಹಣ್ಣಿನ ಪಾನಕ, ಎಳೆನೀರು, ನಿಂಬೆಹಣ್ಣು ಸರಬತ್ತು, ಹಣ್ಣುಗಳನ್ನು ಸೇವಿಸುತ್ತಾರೆ. ಸಂಜೆ ಉಪ್ಪಿಟ್ಟು, ಕಡಲೇಕಾಳುಹುಸಲಿ, ಸಿಹಿ ಅವಲಕ್ಕಿ ಭತ್ತದ ಅರಳು. ರಸಾಯನ ಕೊಸಂಬರಿ. ಈ ದಿನದ ಫಲಾಹಾರವಾಗಿರುತ್ತದೆ. ಮಾಡಿದ ಫಲಾಹಾರವನ್ನು ದೇವರಿಗೆ ನೈವೇದ್ಯ ಮಾಡಿ ಅನಂತರ ತಿನ್ನುತ್ತಾರೆ. ಜಾಗರಣೆ ನಿಮಿತ್ತ, ದೇವಾಲಯಗಳಲ್ಲಿ ಶಿವಾಲಯದ್ಲಲಿ, ರಾಮಮಂದಿರಗಳಲ್ಲಿ ಪುರಾಣ, ಪ್ರವಚನ, ಹಾಡು, ಹರಿಕಥೆ, ನಾಟಕ ಕಾರ್ಯಕ್ರಮಗಳು ಇರುತ್ತವೆ. ಅಲ್ಲದೆ ಶಿವರಾತ್ರಿದಿನ ಉಲ್ಲಾಸ ತರುವ ಕೆಲವು ಆಟಗಳನ್ನು ಆಡುತ್ತಾರೆ. ಹಬ್ಬದ ಹಸಿವು, ನಿದ್ದೆ ಮರೆಯಾಗಲು ಖಷಿಯಿಂದ ಪಗಡೆ, ಚೌಕಾಬಾರ, ಹಳ್ಳಿಗುಳ್ಳಿಮನೆಯಾಟ, ಅಣೆಕಲ್ಲು ಆಟ ಆಡುತ್ತಾರೆ. ಗಂಡು ಮಕ್ಕಳು ಮನರಂಜನೆಗಾಗಿ ಇಸ್ಪೀಟ್ ಆಟ ಆಡುತ್ತಾರೆ. ಇವು ಯಾವುದರಲ್ಲೂ ಆಸಕ್ತಿ ಇಲ್ಲದವರು ಇತ್ತೀಚೆಗೆ ದೂರದರ್ಶನದಲ್ಲಿ ಪ್ರಸಾರವಾಗುವ ಚಲನಚಿತ್ರವನ್ನು ವೀಕ್ಷಿಸುತ್ತಾರೆ. ಜಾತಿ, ಮತ, ಪಂಥ, ಪ್ರವೇಶ ಭೇದವಿಲ್ಲದೆ ಎಲ್ಲರೂ ಜಾಗರಣೆಯಲ್ಲಿ ಭಾಗಿಗಳಾಗುತ್ತಾರೆ. ಈ ದಿನ ಜಾಗರಣೆ ಮಾಡಿದವರು ಮಾರನೆಯ ದಿನ ರಾತ್ರಿ ನಕ್ಷತ್ರಗಳನ್ನು ನೋಡುವವರೆಗೂ ನಿದ್ದೆ ಮಾಡುವುದಿಲ್ಲ. ನಿದ್ದೆ ಮಾಡಿದರೆ ಜಾಗರಣೆ ಫಲ ಸಿಗುವುದಿಲ್ಲ ಎಂಬ ನಂಬಿಕೆಯಿದೆ.

**ವೈದಿಕ ಸಂಪ್ರದಾಯದ ಹಬ್ಬಗಳು**

ವೈದಿಕ ಸಂಪ್ರದಾಯದ ಹಬ್ಬಗಳನ್ನು ಇಂದು ವೈದಿಕರಂತೆಯೇ ಇತರೇ ಸಂಪ್ರದಾಯ ದವರು ಆಚರಣೆ ಮಾಡುತ್ತಾನೆ. ವೈದಿಕರಷ್ಟು ಇತರರಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿಲ್ಲ. ಆದರೂ ಸಹ ಭೀಮನ ಅಮಾವಾಸ್ಯೆ, ವರಮಹಾಲಕ್ಷ್ಮಿವ್ರತ, ಆಷಾಡ ಶುಕ್ರವಾರ, ತುಳಸಿ ಹಬ್ಬ, ಹೋಳಿಹಬ್ಬ, ರಥಸಪ್ತಮಿ ಮುಖ್ಯವಾದ ಹಬ್ಬಗಳು.

**ಆಷಾಡ ಶುಕ್ರವಾರ:** ಆಷಾಡ ಮಾಸದ ಶುದ್ಧ ಮತ್ತು ಬಹುಳದಲ್ಲಿ ವೈಶಾಖ, ಜ್ಯೇಷ್ಠ ಮಾಸಗಳಲ್ಲಿ ಮದುವೆಯಾದಂತಹ ಹೆಣ್ಣು ಮಕ್ಕಳನ್ನು ಪತಿಯ ಮನೆಯಿಂದ ತವರು ಮನೆಗೆ ಕರೆದುಕೊಂಡು ಬಂದು ಪ್ರತಿ ನಾಲ್ಕು ಶುಕ್ರವಾರದಲ್ಲಿ ಎಣ್ಣೆಸ್ನಾನ ಮಾಡಿಸಿ ಮನೆಯಲ್ಲಿ ಲಕ್ಷ್ಮಿ, ಚಾಮುಂಡೇಶ್ವರಿ ಪೂಜೆ ಮಾಡಿಸಿ ಮುತ್ತೈದೆಯರಿಗೆ ಅರಿಶಿನ ಕುಂಕುಮ ಎಲೆ, ಅಡಿಕೆ ಕೊಡಿಸುವ ಶಾಸ್ತ್ರವುಂಟು. ಇದಕ್ಕೆ ಆಷಾಡ ಶುಕ್ರವಾರ ಎಂದು ಹೇಳವುದುಂಟು.

**ಭೀಮನ ಅಮಾವಾಸ್ಯೆ:** ಆಷಾಡ ಬಹುಳ ಅಮಾವಾಸ್ಯೆ ದಿನ ಹೆಣ್ಣು ಮಕ್ಕಳು ಮಾಡುವ ಹಬ್ಬವಿದು. ಮದುವೆಯಾದ ಹೆಣ್ಣುಮಕ್ಕಳು ಭೀಮನಂತಹ ಗಂಡ ದೊರಕಲೆಂದು, ಮದುವೆಯಾದ ಮುತ್ತೈದೆಯರು ಗಂಡನಿಗೆ ಭೀಮನಂತಹ ಶಕ್ತಿ ಕೊಡೆಂದು ಅಮಾವಾಸ್ಯೆಯ ದಿನ ಭೀಮನನ್ನು ಸ್ಮರಿಸಿ ಪೂಜೆ ಮಾಡುತ್ತಾರೆ. ಬ್ರಾಹ್ಮಣರಲ್ಲಿ ಮದುವೆಯಾದ ಹೆಣ್ಣುಮಕ್ಕಳು ಒಂಬತ್ತು ವರ್ಷಗಳು ಈ ಹಬ್ಬವನ್ನು ನಿರಂತರವಾಗಿ ಮಾಡಬೇಕೆಂಬ ನಿಯಮ. ಹೆಣ್ಣು ಮಕ್ಕಳು ಎಣ್ಣೆ ಸ್ನಾನ ಮಾಡಿ ಶಾಸ್ತ್ರೋಕ್ತವಾಗಿ ದೇವರ ಮನೆಯ ಮಂಟಪದಲ್ಲಿ ಭೀಮೇಶ್ವರನ ಕಳಸವಿಟ್ಟು ವಿಧಿವತ್ತಾಗಿ ಪುರೋಹಿತರಿಂದ ಪೂಜೆಯನ್ನು ಮಾಡಿಸಿ ಅವರ ಕೈಯಿಂದಲೇ ಒಂಬತ್ತು ಗಂಟುಗಳನ್ನು ಹಾಕಿದ ದಾರವನ್ನು ಬಲಗೈಗೆ ಕಟ್ಟಿಸಿಕೊಳ್ಳುವರು. ಅನಂತರ ಪುರೋಹಿತರಿಗೆ ಫಲಪುಷ್ಪಗಳನ್ನು ದಕ್ಷಿಣೆ ನಿಡುವರು. ಈ ದಿನ ಪೂಜೆಯಲ್ಲಾ ಆದ ಮೇಲೆ ಪೂಜೆ ಮಾಡಿದವರ ಅಣ್ಣ ಇಲ್ಲವೇ ತಮ್ಮ 'ಭಂಡಾರ' ಒಡೆಯುವ ಕಾರ್ಯಕ್ರಮವಿರುತ್ತದೆ. ಭಂಡಾರದೊಳಗೆ ಶಕ್ತಿಗನುಗುಣವಾಗಿ ದಕ್ಷಿಣೆಯನ್ನು ಇಡಬೇಕು. ಭಂಡಾರವನ್ನು ಹೊಸ್ತಿಲ ಮೇಲೆ ಎರಡು ಕಡೆಯಲ್ಲಿರಿಸಿ ಪೂಜೆ ಮಾಡಿ ಅಣ್ಣ ಅಥವಾ ತಮ್ಮ ಮೊಳಕೈಯಲ್ಲಿ ವೀರ ಮಂಡಿಯನ್ನು ಒಡೆದು ಹೆಣ್ಣುಮಕ್ಕಳಿಗೆ ನೀಡುತ್ತಾರೆ. ಅನಂತರ ಅಲ್ಲಿದ್ದವರು ಅದೇ ಭಂಡಾರವನ್ನು ಪ್ರಸಾದವಾಗಿ ಪಡೆಯುತ್ತಾರೆ. ಈ ಸಮಯದಲ್ಲಿ ಅಕ್ಕ ಪಕ್ಕದ ಮನೆಯವರಿಗೆ ಕುಂಕುಮಕ್ಕೆ ಎಲೆಯಡಿಕೆ ನಿಡುವ ಪದ್ಧತಿಯಿದೆ.

**ವರಮಹಾಲಕ್ಷ್ಮಿಹಬ್ಬ:** ಈ ಹಬ್ಬವನ್ನು ಶ್ರಾವಣ ಶುದ್ಧ ಎರಡನೆಯ ಶುಕ್ರವಾರ ಮಾಡುವ ಹಬ್ಬ. ಇದೊಂದು ಸಾಯಂಕಾಲದ ಹಬ್ಬ. ಅಂದಿನ ಶುಕ್ರವಾರ ಶುಭ ಶುಕ್ರವಾರ ಎಂದು ಕರೆಯಲಾಗುತ್ತದೆ. ಈ ಹಬ್ಬದಲ್ಲಿ ಮಹಿಳೆಯರೆಲ್ಲರೂ ತಮ್ಮ ಪತಿಯ ಆಯಷ್ಯದ ವರ್ಧನೆಗಾಗಿ ಜತೆಗೆ ಸಂಸಾರದಲ್ಲಿ ಸುಖಸಂಪತ್ತು ತುಂಬಿರಲೆಂದು ಆಶಿಸಿ ವ್ರತವನ್ನು ಆಚರಿಸುತ್ತಾರೆ. ವರ ನೀಡುವ ಮಹಾಲಕ್ಷ್ಮಿಯನ್ನು ಮನೆಗೆ ಬರಮಾಡಿಕೊಳ್ಳಲು ಅಂದು ಮನೆಯನ್ನು ಶುಭ್ರವಾಗಿ ತೊಳೆದು ಶುದ್ಧಗೊಳಿಸಿ ತಳಿರುತೋರಣಗಳಿಂದ ಅಲಂಕರಿಸಲಾಗುತ್ತದೆ. ಈ ದಿನ ಉಪವಾಸವಿದ್ದು, ಕಲಶ

ಸ್ಥಾಪನೆ ಮಾಡಿ ದೇವಿಯನ್ನು ಪ್ರತಿಷ್ಠಾಪಿಸಿ ಪ್ರಸಾರ ಮಾಡಿ ಅರ್ಪಿಸಲಾಗುತ್ತದೆ. ಕಡಲೆಯಿಂದ ಮಾಡಿದ ಪದಾರ್ಥವು ದೇವಿಗೆ ಅತ್ಯಂತ ಪ್ರಿಯವಾದದ್ದು. ಈ ದಿನ ಲಕ್ಷ್ಮಿಯನ್ನು ಭಕ್ತಿಯಿಂದ ಪೂಜಿಸಿ ವರಕೇಳಿಕೊಂಡರೆ ಆ ವರಗಳನ್ನು ನೀಡುತ್ತಾಳೆಂಬ ನಂಬಿಕೆಯನ್ನು ವರಮಹಾಲಕ್ಷ್ಮಿ ವ್ರತ ಆಚರಿಸುವವರು ಐವರು ಸುಮಂಗಲೆಯರನ್ನು ಕರೆದು ಅರಿಶಿನ ಕುಂಕುಮ, ಬಳೆ, ಹೂವುಗಳನ್ನು ಇಟ್ಟುಕೊಡಲಾಗುತ್ತದೆ. ಕೆಲವು ಜನಪದರು ಇವರ ಜನಾಂಗಗಳ ಸಂಪರ್ಕದಿಂದಾಗಿ ಇತ್ತೀಚೆಗೆ ವರಮಹಾಲಕ್ಷ್ಮಿ ಹಬ್ಬವನ್ನು ಅಲ್ಲಲ್ಲಿ ಮಾಡುವುದು ಕಂಡುಬರುತ್ತದೆ. ಪೂಜೆ, ಮಂಗಳಾರತಿ, ಮುಗಿದ ಮೇಲೆ ಆರತಿ ಮಾಡಿ ಮನೆಯವರೆಲ್ಲ ಮತ್ತೊಮ್ಮೆ ಲಕ್ಷ್ಮೀ ಸ್ಮರಿಸಿ ಸಹಪಂಕ್ತಿ ಭೋಜನ ಮಾಡಲಾಗುತ್ತದೆ.

**ತುಳಸಿ ಹಬ್ಬ:** ಕಾರ್ತಿಕ ಶುದ್ಧ ದ್ವಾದಶಿ ದಿನದಂದು ಬರುವ ಸಂಜೆಯ ಹಬ್ಬವಿದು. ಈ ದಿನ ಪೂಜೆಯಲ್ಲಿ ತುಳಸಿ ಪೂಜೆಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ತುಳಸಿ ಹಬ್ಬದ ಹಿಂದಿನ ದಿನವೇ ತುಳಸಿ ಕಟ್ಟೆಗೆ ಮಣ್ಣ ಹೊಡೆದು ಮಂಟಪದ ಸುತ್ತಲೂ ಗೋವು, ಶ್ರೀ ಕೃಷ್ಣನ ಹೆಜ್ಜೆ ರಂಗೋಲಿ ಬಿಡಿಸುವ ಕ್ರಮವಿದೆ. ತುಳಸಿ ಕಟ್ಟೆಯ ಸುತ್ತ ಮಂಟಪ ರಚಿಸಿ ನೆಲ್ಲಿಕೊಂಬೆ ನೆಡುತ್ತಾರೆ. ಜತೆಗೆ ಬಾಳೆಕಂದು, ಕಬ್ಬು, ಮಾವಿನ ತಳಿರು ತೋರಣಗಳಿಂದ, ಹೂವಿನಿಂದ ಶೃಂಗರಿಸಿ ಅರ್ಧಚಂದ್ರಾಕೃತಿ ತಿಲಕವಿಡುತ್ತಾರೆ. ನೆಲ್ಲಿಕಾಯಿ ಮಧ್ಯೆಯಲ್ಲಿ ತೂತು ಕೊರೆದು ತುಪ್ಪದ ಬತ್ತಿ ಹಚ್ಚಿ ದೇವರಿಗೆ ಆರತಿ ಬೆಳಗಿ ಬಂದವರಿಗೆಲ್ಲಾ ಅರಿಶಿಣ ಕುಂಕುಮ ಕೊಡುತ್ತಾರೆ. ಹಿಂದೆ ಬ್ರಾಹ್ಮಣರು ಆಚರಿಸುತ್ತಿದ್ದರು ಇಂದು ಆಸಕ್ತಿ ಇರುವವರೆಲ್ಲ ತಮ್ಮ ಶಕ್ತ್ಯಾನುಸಾರ ತುಳಸಿ ಹಬ್ಬವನ್ನು ಆಚರಿಸುತ್ತಾರೆ.

**ಹೋಳಿಹಬ್ಬ:** ಈ ಹಬ್ಬದ ನಿಜವಾದ ಹೆಸರು 'ಕಾಮನಹುಣ್ಣಿಮೆ'. ಇದು ಶೃಂಗಾರಕ್ಕೆ ಮೀಸಲಾದ ಹಬ್ಬ ಎನ್ನುತ್ತಾರೆ. ಮದನೋತ್ಸವ ಹೋಲಿಕಾ ಇತ್ಯಾದಿ ಹಲವಾರು ಹೆಸರುಗಳಿಂದ ಆಚರಿಸಲ್ಪಡುವ ಈ ಹಬ್ಬಗಳನ್ನು ಹೆಂಗಸರೇ ಆಚರಿಸುತ್ತಾರೆರ. ದುಡಿಯುವ ತನಗೆ ಸಂತೋಷಪಡಲು ಒಂದು ಹಬ್ಬವೂ ಇಲ್ಲ ಎಂದು ಗಂಡುದೇವರ ಮುಂದೆ ದೂರಿಕೊಂಡನಂತೆ ಅದಕ್ಕೆ ದೇವರು ವರ್ಷದಲ್ಲಿ ಒಮ್ಮೆಯಾದರೂ ಗಂಡುಸರು ನೆಮ್ಮದಿ ಅನುಭವಿಸಲಿ ಎಂದು 'ಹೋಳಿಹಬ್ಬ' ಆಚರಿಸಲು ಸೂಚಿಸಿದನಂತೆ. ಆದ್ದರಿಂದ ಹೋಳಿ 'ಗಂಡಸರಿಗೆ ಮೀಸಲಾದ ಹಬ್ಬ' ಈ ಹಬ್ಬವನ್ನು ಫಾಲ್ಗುಣ ಮಾಸದ ಹುಣ್ಣಿಮೆಯಿಂದ ಪಂಚಮಿಯವರೆಗೆ ಆಚರಿಸುತ್ತಾರೆ. ಶಿಶಿರ ಋತುವಿನ ಆಗಮನದೊಂದಿಗೆ ಹೋಳಿಹಬ್ಬ ಬರುತ್ತದೆ. ಹೋಳಿ ಹಬ್ಬದ ವಿಶೇಷವೇನೆಂದರೆ ಕಾಮದಹನ!!

ಈ ಹಬ್ಬ ಆಚರಿಸುವಲ್ಲಿ ಜಾತಿ, ಮತ, ಪಂಥ ಇತ್ಯಾದಿ ಭೇದ ಭಾವಗಳು ಅಡ್ಡಿಯಾಗಲಾರವು. ಶತಶತಮಾನಗಳಿಂದ ಗ್ರಾಮದಲ್ಲಿ ಹೋಳಿಯನ್ನು ಸೌಹಾರ್ದಯುತವಾಗಿ ಆಚರಿಸುತ್ತಾ ಬಂದಿರುವುದನ್ನು ಕಾಣಬಹುದು. ಹೋಳಿ ಹಬ್ಬ ಬಂತೆಂದರೆ ತರುಣರಿಗೆ ಅತ್ಯಂತ ಸಂತಸದ ಸಡಗರ ಸಂಭ್ರಮ. ಡೋಲು, ಡೌಲಿನೊಂದಿಗೆ ಗುಂಪುಗುಂಪಾಗಿ ಸದ್ದುಗದ್ದಲ ಮಾಡುತ್ತಾ ಪ್ರತಿಯೊಬ್ಬರ ಮನೆಯ ಬಾಗಿಲ ಮುಂದೆ ಹೋಗಿ ಅರಚಿ-ಕಿರುಚಿ ಕಾಮದಹನಕ್ಕಾಗಿ ಮರಮುಟ್ಟುಗಳನ್ನು ಬಾಯಿ ಚಪಲ ತೀರಿಸಿಕೊಳ್ಳಲು ಹೀಗೆ ತಮಗೆ ಬೇಕಾದ ಹಾಡುಗಳನ್ನು ಹಾಡುತ್ತಾ, ಕುಣಿಯುತ್ತಾ ಪದಾರ್ಥಗಳನ್ನು ಪಡೆಯುತ್ತಾ ಕಾಮನ ಗುಣಗಾನ ಮಾಡಿಕೊಂಡು ಮನೆಯಿಂದ ಮನೆಗೆ ಬೀದಿಯಿಂದ ಬೀದಿಗೆ ಸಂಚರಿಸುತ್ತಾ "ಹಳೆಯದನ್ನೆಲ್ಲಾ ಹೋಳಿಯಲ್ಲಿ ಸುಡು" ಎಂದು ಜೋರಾಗಿ ಗಾದೆಯನ್ನು ಹೇಳುತ್ತಾ ಕಾಮನ ಕಟ್ಟೆಯ ಹತ್ತಿರ ಬರುತ್ತಾರೆ. ಹುಣ್ಣಿಮೆಯ ರಾತ್ರಿಯಲ್ಲಿ ಊರಿನ ಸಮಸ್ತರ ಸಮಕ್ಷಮದಲ್ಲಿ ತರುಣರು ತಾವು ಒಟ್ಟಿದ ಮರದ ತುಂಡು, ಸೌದೆ, ಬೆರಣಿ, ಮೊರ ಇತ್ಯಾದಿ ವಸ್ತುಗಳನ್ನು ರಾಶಿ ಹಾಕಿ ಪ್ರತಿಮೆಗಳಿಗೆ ಪೂಜೆ ಸಲ್ಲಿಸಿ ಮಂಗಳಾರತಿ ಮಾಡುತ್ತಾರೆ. ಅದೇ ಮಂಗಳಾರತಿಯಿಂದ ರಾಶಿಗೆ ಅಗ್ನಿ ಸ್ಪರ್ಶ ಮಾಡಿದಾಗ ನೆರೆದವರೆಲ್ಲಾ ಕುಣಿದು ಕುಪ್ಪಳಿಸುತ್ತಾರೆ. ಈ ಅಗ್ನಿ ಪೂಜೆಯ ಮುಂದುವರಿಕೆಯಾಗಿ ಸಾಗಿ ಬಂದ ಹೋಳಿ ಹಬ್ಬ ಹಲವಾರು "ಪೌರಾಣಿಕ, ಐತಿಹಾಸಿಕ, ಸಾಂಸ್ಕೃತಿಕ ಪರಂಪರೆಗಳನ್ನು ಪಡೆದು ಈ ಪ್ರದೇಶದಲ್ಲಿಯೂ ಆಚರಣೆಯಲ್ಲಿ ಉಳಿದುಬಂದಿದೆ. ಕಾಮನ ಸುಟ್ಟ ಬೂದಿಯನ್ನು ರೈತರು ಒಯ್ದು ತಮ್ಮ ಮನೆಯ ಧಾನ್ಯಗಳಲ್ಲಿ ಸೇರಿಸುತ್ತಾರೆ. ಬಿತ್ತುವ ಬೀಜದಲ್ಲಿ ಇದನ್ನು ಸೇರಿಸಿ ಭೂಮಿಗೆ ಬಿತ್ತುತ್ತಾರೆ. ಇದರಿಂದ ಬೀಜ ಹುಸಿಯಾಗದೆ ಹುಟ್ಟುತ್ತದೆ. ಇದರಿಂದ ಒಳ್ಳೆಯ ಫಸಲು ದೊರೆಯುವುದೆಂದು ನಂಬಿಕೊಂಡಿದ್ದಾರೆ. ಕಾಮನ ಸುಡುವ ಕಾಲಕ್ಕೆ ಬೂದಿ ಯಾವ ದಿಕ್ಕಿಗೆ ಹಾರುವುದೂ ಆ ಭಾಗ ಮಳೆ ಬೆಳೆಯಿಂದ ಸಮೃದ್ಧಿಯಾಗುವುದೆಂದು ತಿಳಿಸುತ್ತಾರೆ.

**ಜನಪದ ಹಬ್ಬಗಳು:**

ಪ್ರಕೃತಿಯಲ್ಲಿ ಅಡಗಿರುವ ಅನಂತ ಶಕ್ತಿಯನ್ನು ಆರಾಧಿಸಿ ಒಲಿಸಿಕೊಳ್ಳಲು ಜನಪದರು ನಡೆಸುತ್ತ ಬಂದ ಹಲವು ಬಗೆಯ ಆಚರಣೆಗಳೇ ಜನಪದ ಹಬ್ಬಗಳು. ಕಲ್ಲುಗಿಡ, ಮರ, ಮಳೆ, ಬೆಳೆ, ತೋಟ ತುಡಿಕೆಗಳು ಕಷ್ಟಕಾರ್ಪಣ್ಯ ಮೊದಲಾದ ಕಡೆಗಳಲ್ಲಿ ದೇವದೇವತೆಗಳು ಇರುವುದೆಂದು ಜನಪದರು ಕಲ್ಪಿಸಿಕೊಂಡು ಪೂಜಿಸಿ ಪೋಷಿಸಿಕೊಂಡು ದೇವ ದೇವತೆಗಳಿಗೆ ಹಬ್ಬಗಳನ್ನಾಗಿ ಆಚರಿಸಿಕೊಂಡು ಬಂದಿದ್ದಾರೆ. ಜನಪದರ ಹಬ್ಬಗಳನ್ನು ಮುಖ್ಯವಾಗಿ ಎರಡು ಗುಂಪುಗಳಾಗಿ ಮಾಡಬಹುದು.

೧) ಗ್ರಾಮದೇವತೆ ಹಬ್ಬಗಳು

೨) ಕುಲದೇವತೆ ಹಬ್ಬಗಳು

೧) **ಗ್ರಾಮದೇವತೆ ಹಬ್ಬಗಳು:** ದೊಡ್ಡಮ್ಮ, ಚಿಕ್ಕಮ್ಮನ ಹಬ್ಬ, ಮಾರಮ್ಮನ ಹಬ್ಬ ಮೊದಲಾದ ಹಬ್ಬಗಳನ್ನು ಹಿಂದೆ ವೈಭವಯುತವಾಗಿ ಆಚರಿಸುತ್ತಿದ್ದರು. ಇಂದು ಆಧುನಿಕತೆಯಿಂದಾಗಿ ಬದುಕೇ ಭಾರವೆನಿಸಿದಾಗ ಹಿಂದಿನ ವೈಭವಗಳೆಲ್ಲ ಕಡಿಮೆಯಾಗಿ ಹಬ್ಬಗಳು ಸರಳವಾದವು. "ವರ್ಷಕ್ಕೊಮ್ಮೆ ಹಿಂದಿನ ವೈಭವಗಳೆಲ್ಲ ಕಡಿಮೆಯಾಗಿ ಹಬ್ಬಗಳು ಸರಳವಾದವು. "ವರ್ಷಕ್ಕೊಮ್ಮೆ ನಡೆಯುತ್ತಿದ್ದ ಗ್ರಾಮದೇವತೆಗಳ ಹಬ್ಬಗಳು ವಿರಳವಾಗಿ ಗ್ರಾಮದ ಜನರಿಗೆ ಮಾಡಬೇಕೆನಿಸಿದಾಗ ಅನುಕೂಲವಾದಾಗ ಗ್ರಾಮದೇವತೆಗಳ ಹಬ್ಬಗಳನ್ನು ಆಚರಣೆ ಮಾಡಿಕೊಂಡು ಬರುವುದು ಕಂಡು ಬರುತ್ತದೆ.

೨) **ಕುಲದೇವತೆ ಹಬ್ಬಗಳು:** ಗ್ರಾಮದೇವತೆಯ ಹಬ್ಬಗಳಿಗಿಂತಲೂ ಹೆಚ್ಚು ಪ್ರಭಾವಶಾಲಿಗಳಾದವುಗಳು ಕುಲದೇವತೆ ಹಬ್ಬಗಳು. ಇವು ಹೆಚ್ಚಾಗಿ ಆಯಾಯ ಕುಲದೇವತೆ ವೈಯಕ್ತಿಕ ಮನೆತನದ ದೇವತೆಗಳಾದರೂ ಇದಕ್ಕೆ ಕಾರಣ ಎಂದು ಹೇಳಬಹುದು. ಕುಲದೇವತೆಯ ಹಬ್ಬಗಳಲ್ಲಿ ಬಲು ಕಟ್ಟುನಿಟ್ಟುಗಳನ್ನು ಆಚರನೆ ಇರುವುದನ್ನು ಗಮನಿಸಬಹುದು. ಕುಲದೇವತೆಗಳಲ್ಲಿ ಮುಖ್ಯವಾಗಿ ಕಾರ್ಲೆ ಹುಚ್ಚಮ್ಮನ ಹಬ್ಬ, ಲಕ್ಷ್ಮಿ ದೇವಮ್ಮನ ಹಬ್ಬ, ಭೂತಪ್ಪನ ಹಬ್ಬ ಮೊದಲಾದವುಗಳನ್ನು ಆಯಾಯ ಒಕ್ಕಲಿನ ಹಬ್ಬಗಳೆಂದು ಹೇಳಬಹುದು.

ಹಬ್ಬಗಳು ಜನಸಾಮಾನ್ಯರಿಗೆ ಅವರ ದೈನಂದಿನ ಜೀವನದ ಯಾಂತ್ರಿಕತೆಯನ್ನು ನೀಗಿಸಿ ಹೊಸ ಉತ್ಸಾಹ ಉಲ್ಲಾಸಗಳನ್ನು ನೀಡುವುದರಿಂದ ಇವುಗಳ ಆಗಮನ ಮತ್ತು ಆಚರಣೆ ಅವರ ಪಾಲಿಗೆ ಆನಂದ ನೀಡುತ್ತದೆ. ಅಲ್ಲದೆ ಅನೇಕ ಜನಪದ ನಂಬಿಕೆಗಳು ಆಶಯಗಳು ಸಂಕೇತಗಳು ಈ ಹಬ್ಬಗಳೊಂದಿಗೆ ಬೆಸೆದುಕೊಂಡಿರುವುದರಿಂದ ಸಾಂಪ್ರದಾಯಿಕ ಹಿನ್ನಲೆಯಲ್ಲಿಯೂ ಹಬ್ಬಗಳ ಆಚರಣೆ ಮುಖ್ಯವಾಗಿರುತ್ತವೆ.

## ೨. ಸಂಪ್ರದಾಯಗಳು

ಮನುಷ್ಯ ಬದುಕುವುದನ್ನು ಕಲಿತ ಹಾಗೆ ಉತ್ತಮವಾಗಿ ಬದುಕಬೇಕೆಂಬ ಅಪೇಕ್ಷೆ ಆತನಲ್ಲಿ ಬಲವಾಯಿತು. ಮುಂದೆ ಅದಕ್ಕೊಂದು ಕ್ರಮಬದ್ಧ ರೂಪು ತಂದುಕೊಳ್ಳಲು ಇತರರು ಅದನ್ನು ಅನುಸರಿಸುವಂತಾಗಲು ಅನೇಕ ಕಟ್ಟುಕಟ್ಟಳೆಗಳನ್ನು ವಿಧಿಸಿಕೊಂಡು ತಮ್ಮ ಸಮಾಜದ ಒಬ್ಬ ಹಿರಿಯ ಬುದ್ಧಿವಂತನ ದೂರದೃಷ್ಟಿ ಚಿಂತನೆಗಳನ್ನು ಸಮಾಜದ ಇತರ ಸದಸ್ಯರೂ ಅದನ್ನು ಒಪ್ಪಿ ಹಾಗೆ ಬದುಕಿನಲ್ಲಿ ಅನುಸರಣೆಗೆ ತಂದಾಗ ಅವು ಶಾಸ್ತ್ರ ಸಂಪ್ರದಾಯಗಳಾದವು. ನಾಗರಿಕತೆಯ ಪ್ರಭಾವ ಹೆಚ್ಚಾಗಿ ಮನುಷ್ಯನ ಜೀವನದ ವಿಚಾರ, ಯೋಜನೆಗಳ ಮೇಲೆ ಅತೀವವಾದ ಪ್ರಭಾವ ಬೀರುತ್ತಿದ್ದರೂ ತಮ್ಮ ಸಂಪ್ರದಾಯಗಳ, ನಂಬಿಕೆಗಳ ಮೆಲಿನ ಆತನ ಆಸಕ್ತಿ

ಕಡಿಮೆಯಾಗಿಲ್ಲ ಎನ್ನುವುದಕ್ಕೆ ಇಂದು ಜನರು ಆಚರಿಸಿಕೊಂಡು ಬರುತ್ತಿರುವಂತಹ ಆಚಾರಗಳೇ ಸಾಕ್ಷಿಯಾಗಿದೆ. ಆದರೂ ಹಿಂದಿನ ಆಚರಣೆ, ಸಂಪ್ರದಾಯಗಳಿಗೆ ಹೋಲಿಸಿದರೆ ಇಂದು ಬದಲಾಗಿವೆ ಸಂಕೀರ್ಣವಾಗಿವೆ ಎಂದು ಹೇಳಬಹುದು.

ಸಂಪ್ರದಾಯನಿಷ್ಠವಾದ ಬದುಕು ಜನನ ಪೂರ್ವದಿಂದ ಮರಣೋತ್ತರದಲ್ಲೂ ಅನೇಕ ಶಾಸ್ತ್ರಾಚಾರಗಳಿಂದ ಕೂಡಿರುತ್ತದೆ. ಇಂತಹ ಬದುಕಿನಲ್ಲಿ ವಿವಾಹ ಹಾಗೂ ಶವಸಂಸ್ಕಾರಗಳು ಪ್ರಮುಖ ಸಂಪ್ರದಾಯಗಳನ್ನು ಪರಿಗಣಿಸಬಹುದು. ಇವುಗಳ ಜತೆಗೆ ಮಗು ಜನಿಸಿದಾಗ ಹೆಣ್ಣು ಮೈನೆರೆದಾಗ ಆಚರಿಸುವಂತಹ ಸಂಪ್ರದಾಯಗಳನ್ನು ನೋಡಬಹುದು.

**ಜನನದಲ್ಲಿ:** 'ಜನ್ಮಜನ್ಮಗಳಲೆಲ್ಲ ಮನವ ಜನ್ಮ ದೊಡ್ಡದು' ಎಂಬ ಮಾತಿದೆ. ಮಾನವನಾಗಿ ಹುಟ್ಟಲು ಅನೇಕ ಜನ್ಮಗಳನ್ನು ಪಡೆದಿರಬೇಕು ಎಂದು ಹೇಳಲಾಗುತ್ತದೆ. ಮನುಷ್ಯ ತನ್ನದೇ ಆದಂತಹ ನಂಬಿಕೆ ಆಚರಣೆಗಳನ್ನು ಹೊಂದಿರುತ್ತಾನೆ ಮತ್ತು ಅವುಗಳನ್ನು ಆಚರಿಸುತ್ತಾನೆ. ಪೂರ್ವಕಾಲದಲ್ಲಿ ಯಾಕೆ ಇಂದಿಗೂ ಕೂಡ ಮಗುವನ್ನು ಪಡೆಯುವಂತಹ ಹೆಣ್ಣನ್ನು ನಿಷ್ಠುರವಾಗಿ ಕಾಣಲಾಗುತ್ತದೆ. ಮಕ್ಕಳನ್ನು ಪಡೆಯದೆ ಇರುವಂತಹ ಹೆಣ್ಣಿನ ಜನ್ಮ ಸಾರ್ಥಕವಾಗುವುದಿಲ್ಲ ಎಂದು ಹೇಳುತ್ತಿದ್ದರು.

ಚೊಚ್ಚಲು ಬಸುರಿಯಾದ ಹೆಣ್ಣನ್ನು ಸಾಮಾನ್ಯವಾಗಿ ಏಳನೆಯ ತಿಂಗಳಿನಲ್ಲಿ ತವರಿಗೆ ಕರೆತರುವುದು ಇಲ್ಲಿನ ವಾಡಿಕೆ. ಮೊದಲ ಹೆರಿಗೆ ತವರಿನಲ್ಲೇ ನಡೆಯಬೇಕೆಂಬುದು ಕಟ್ಟಳೆ. ನಿರ್ಧಿಷ್ಟ ಅವಧಿ ತುಂಬಿದ ಬಳಿಕ ತವರಿನವರು ಮಗಳನ್ನು ತವರಿಗೆ ಕರೆತರಲು ಊರಿನ ಜೋಯಿಸರನ್ನು ಕಂಡು ಒಳ್ಳೆಯ ದಿನವನ್ನು ಗೊತ್ತುಮಾಡಿಕೊಂಡು ಗಂಡನ ಮನೆಗೆ ಹೋಗುತ್ತಾರೆ.

**ಸೀಮಂತ:** ಮೊದಲ ಬಾಣಂತನಕ್ಕೆಂದು ಸೊಸೆಯನ್ನು ತವರಿಗೆ ಕಳುಹಿಸಿ ಕೊಡುವಾಗ ಈ ಸಮಾರಂಭವನ್ನು ಏರ್ಪಡಿಸಲಾಗುತ್ತದೆ. ಆ ದಿನ ಗರ್ಭಿಣಿಗೆ ಬೆಲೆಬಾಳುವ ಸೀರೆ, ರವಿಕೆಗಳನ್ನು ಉಡಿಸಿ ವಿಶೇಷವಾಗಿ ಚಿನ್ನದ ಒಡವೆಗಳನ್ನು ತೊಡಿಸಿ ಸಿಂಗರಿಸುತ್ತಾರೆ. ಆಕೆಯನ್ನು ಹಸೆಮಣೆಯಲ್ಲಿ ಕೂರಿಸಿ ಹೂವಿನ ಹಾರ ಹಾಕಿ ಅರಿಶಿನ ಕುಂಕುಮ ಹಚ್ಚಿ ಮುತ್ತೈದೆಯರು ಆರತಿ ಬೆಳಗಿ ಹರಸುತ್ತಾರೆ. ಅಮದು ಅವಳು ಬಯಸುವ ಎಲ್ಲಾ ಬಗೆಯ ತಿಂಡಿತಿನಿಸುಗಳನ್ನು ಮಾಡಿ ಅವಳ ಮುಂದಿಟ್ಟಿರುತ್ತಾಳೆ. ಆಪ್ತ ಬಂಧುಗಳೆಲ್ಲ ಬಂದು ಹಾರೈಸಿ ಶುಭಕೋರಿ ತವರು ಮನೆಗೆ ಕಳುಹಿಸಿಕೊಡುತ್ತಾರೆ.

**ಬಯಕೆಗಳು:** ಆ ಸಮಯದಲ್ಲಿ ಗರ್ಭಿಣಿಗೆ ನಾನಾ ಬಯಕೆಗಳು ಉಂಟಾಗುತ್ತವೆ. ಊಟ, ತಿಂಡಿ, ತಿನಿಸುಗಳ ಬಯಕೆಯಷ್ಟೇ ತಿವ್ರವಾಗಿ ಸಂಬಂಧಿಕರನ್ನು ಕಾಣುವ ಬಯಕೆ ಮತ್ತು ಏನೇನೋ ಆಸೆ ಆಕಾಂಕ್ಷೆಗಳು ಉಂಟಾಗಬಹುದು. ಅವುಗಳನ್ನು

ಪೂರೈಸಲೇಬೇಕೆಂಬ ನಿರ್ಬಂಧವಿದೆ ಒಂದು ವೇಳೆ ಆಕೆಯ ಬಯಕೆಗಳನ್ನು ಈಡೇರಿಸದಿದ್ದರೆ ಹೆರಿಗೆ ಕಷ್ಟವಾಗಬಹುದು, ಹುಟ್ಟಿದ ಮಗುವಿಗೆ ಕಣ್ಣುಕಾಣುವುದಿಲ್ಲ, ಎದೆ ಹಾಲು ಇಂಗಿಹೋಗುತ್ತದೆ. ದುರ್ಬಲ ಮನಸ್ಕಳಾಗುತ್ತಾಳೆ ಎಂಬುದಾಗಿ ನಂಬಲಾಗಿ ಸಾಮಾನ್ಯವಾಗಿ ಅಕೆಯ ಎಲ್ಲ ಬಯಕೆಗಳನ್ನು ಈಡೇರಿಸಲು ಎಲ್ಲರೂ ಪ್ರಯತ್ನಿಸುತ್ತಾರೆ.

**ಗರ್ಭಿಣಿ ನಿರ್ವಹಿಸುವ ಕೆಲಸಗಳು:** "ಬಸುರಿಯಲ್ಲಿ ಗೇದು ಉಣ್ಣು, ಬಾಣಂತಿಯಲ್ಲಿ ಕೂತು ತಿನ್ನು" ಎಂಬ ಗಾದೆಯಂತೆ ಗರ್ಭಿಣಿ ಹೆಂಗಸು ಪ್ರಸವ ಕಾಲ ಬರುವವರೆಗೆ ಏನಾದರೂ ಸಣ್ಣ ಪ್ರಮಾಣದ ಕೆಲಸದಲ್ಲಿ ತೊಡಗಿದರೆ ಹೆರಿಗೆ ಸುಲಭವಾಗಿ ಆಗುತ್ತಿದೆ ಎಂದು ಹೇಳುತ್ತಾರೆ. ಆದರೆ ಇಂದಿನ ಗರ್ಭಿಣಿಯರು ಯಾವ ಕೆಲಸವನ್ನು ಮಾಡುವುದಿಲ್ಲ. ಆದ್ದರಿಂದ ಇಂದು ಕೃತಕ ಹೆರಿಗೆಯನ್ನು ನಾವು ಹೆಚ್ಚಾಗಿ ನೋಡಬಹುದು.

**ಹೆರಿಗೆ:** ದಿನಗಳು ತುಂಬಿ ಹೆರಿಗೆ ನೋವು ಕಾಣಿಸಿಕೊಂಡಾಗ ಹಿಂಸೆ ಹತ್ತಾರು ಹೆರಿಗೆ ಮಾಡಿಸಿದ ಅನುಭವಿ ಸೂಲಗಿತ್ತಿಯೊಬ್ಬಳನ್ನು ಕೂಡಲೇ ಬರಮಾಡಿಕೊಳ್ಳಲಾಗುತ್ತಿತ್ತು. ಆದರೆ ಇಂದು ತಕ್ಷಣ ಆಸ್ಪತ್ರೆಗೆ ಕರೆದುಕೊಂಡು ಹೋಗುವರು. ಹಿಂದೆ ಹೆರಿಗೆಯ ಮುಂಚೆ ಗಾಳಿ ಬೆಳಕು ಇಲ್ಲದ ಪಡಸಾಲೆಯಲ್ಲಿಯೇ ಕಂಬಳಿ ಕಟ್ಟಿಯೋ, ನೆರಿಗೆ ಕಟ್ಟಿಯೋ ಸೂತಕದ ಮನೆಯನ್ನು ನಿರ್ಮಿಸಲಾಗುತ್ತಿತ್ತು. ಇಂದು ಇಂತಹ ಯಾವ ಕೆಲಸವನ್ನು ನೋಡಲು ಸಿಗುವುದಿಲ್ಲ. ಮಗು ಜನಿಸಿದ ಕೂಡಲೇ ಮಗುವಿನ ಹೊಕ್ಕಳಬಳ್ಳಿಯನ್ನು ಕತ್ತಿರಿಸುತ್ತಾರೆ. ಮಗು ಜನಿಸಿದ ಸುದ್ಧಿ ತಿಳಿದ ತಂದೆಗಂತೂ ಸಂತೋಷ ಹೇಳತೀರದು. ಸಂಬಂಧಿಕರೆಲ್ಲ ಬಂದು ನೋಡಿಕೊಂಡು ಹೋಗುತ್ತಾರೆ.

**ಸೂತಕ:** ಹೆರಿಗೆಯಾದ ಕ್ಷಣದಿಂದಲೇ ಸುತಕವೆಂದು ಪರಿಗಣಿಸುತ್ತಾರೆ. ಮಗುವಿಗೆ ಬಿಸಿ ನೀರಿನಿಂದ ಮೈತೊಳೆಯುತ್ತಾರೆ. ಬಾಣಂತಿಗೂ ಸ್ನಾನ ಮಾಡಿಸುತ್ತಾರೆ. ಒಂದು ತಿಂಗಳತನಕ ಆಕೆಗೆ ಮೃದುವಾದ ಆಹಾರವನ್ನು ಕೊಡುತ್ತಾರೆ. ಬಿಸಿಬಿಸಿಯಾದ ಅನ್ನ, ಹಾಲು, ಮೆಣಸಿನಸಾರು, ಬೆಳ್ಳುಳ್ಳಿ, ಬೇಳೆ ಮಿಶ್ರಿತ ಸಾರು ಇವುಗಳನ್ನು ಕೊಡುತ್ತಾರೆ. ಹೆರಿಗೆಯ ದಿನದಿಂದ ಕಟ್ಟುನಿಟ್ಟಾಗಿ ಒಮಬತ್ತು ದಿನವೂ ಸೂತಕವನ್ನು ಹೊಂದಿರುತ್ತಾರೆ. ಕೇವಲ ಇವರಿಗೆ ಮಾತ್ರವಲ್ಲದೆ ರಕ್ತ ಸಂಬಂಧ ಹೊಂದಿರುವರಿಗೂ ಈ ಸೂತಕ ಇರುತ್ತದೆ. ಈ ಸಮಯದಲ್ಲಿ ಯಾವ ಶುಭ ಕಾರ್ಯವನ್ನು ನೆರವೇರಿಸುವುದಿಲ್ಲ. ದೇವಾಲಯಗಳಿಗೆ ಹೋಗುವುದಿಲ್ಲ ಹೀಗೆ ಸೂತಕವನ್ನು ಕಟ್ಟುನಿಟ್ಟಾಗಿ ಮಾಡುತ್ತಾರೆ.

**ಸೂತಕ ತೆಗೆದುಕೊಳ್ಳುವುದು:** ಹೆರಿಗೆಯಾದ ಒಂಬತ್ತು ದಿನಗಳ ಅನಂತರ ಹಳ್ಳಿಯ ಅಗಸ ಸುತಕದ ಮನೆಯವರ ಬಟ್ಟೆಬರೆಗಳನ್ನು ತೊಳೆದು ಶುದ್ಧಿಗೊಳಿಸುತ್ತಾನೆ. ಕುಟುಂಬದವರು ಮನೆಯೆಲ್ಲವನ್ನು ತೊಳೆದು ಸ್ನಾನ ಮಾಡಿ ಮಡಿಬಟ್ಟೆ

ಉಟ್ಟುಕೊಳ್ಳುತ್ತಾರೆ. ದಾಸಯ್ಯ ತನ್ನ ಮನೆಯ ಬೂದಿಗೆ ಜೇನುತುಪ್ಪ ಗೋಮೂತ್ರ-ಗಳನ್ನು ಬೆರೆಸಿದ ತೀರ್ಥವನ್ನು ಮನೆಗೆಲ್ಲ ಸಿಂಪಡಿಸಿ ಸೂತಕದ ಮನೆಯನ್ನು ಪವಿತ್ರಗೊಳಿಸುತ್ತಾರೆ. ಅಲ್ಲಿಗೆ ಸೂತಕ ಕಳೆಯಿತೆಂದು ಭಾವಿಸುತ್ತಾರೆ. ಇದನ್ನೇ ಕೆಲವರು 'ನಾಮಹಾಕಿಸಿಕೊಳ್ಳುವುದು' ಎಂದು

**ಜಾತಕರ್ಮ:** ಜೋಯಿಸರಿಗೆ ಮಗುವಿನ ಜಾತಕ ಬರೆದುಕೊಡುವಂತೆ ಕೋರುತ್ತಾರೆ. ಮಗು ಹುಟ್ಟಿದ ಗಳಿಗೆಯ ಆಧಾರದ ಮೇಲೆ ಹುಟ್ಟಿದ ನಕ್ಷತ್ರ, ರಾಶಿಗಳ ಪಟ್ಟಿಯೊಂದನ್ನು ರಚಿಸಿ ಮಗುವಿನ ಹೆಸರಿನ ಮೊದಲ ಅಕ್ಷರವನ್ನು ಸೂಚಿಸಿ ಮಗುವನ್ನು ತೊಟ್ಟಿಲಿಗೆ ಹಾಕುವುದು, ಯಾವಾಗ ಎಂದು ಹೇಳುತ್ತಾರೆ. ಮಗು ಏನಾದರೂ ಕೆಟ್ಟ ನಕ್ಷತ್ರದಲ್ಲಿ ಜನಿಸಿದ್ದರೆ ಅವರೇ ಪರಿಹಾರವನ್ನೂ ಸೂಚಿಸಿ ಕೆಲವು ದಾನ ಮಾಡಿದರೆ ದೋಷ ಪರಿಹಾರವಾಗುತ್ತದೆಂದು ಹೇಳುತ್ತಾರೆ.

**ನಾಮಕರಣ:** ಹೆರಿಗೆಗಾಗಿ ಹನ್ನೊಂದು ದಿನಗಳಾದಾಗ ನಾಮಕರಣ ಅಥವಾ 'ತೊಟ್ಲುಶಾಸ್ತ್ರ' ಎಂದು ಆಚರಿಸುತ್ತಾರೆ. ಆಗ ರಕ್ತಸಂಬಂಧಿಗಳನ್ನು ಕರೆಯುತ್ತಾರೆ. ನಮಕರಣದ ದಿನ ಮನೆಗೆಲ್ಲ ಸುಣ್ಣ ಬಣ್ಣ ಬಳಿದು ಹಬ್ಬದ ದಿನದಂತೆ ಸಿಂಗರಿಸುತ್ತಾರೆ ಸಾಮಾನ್ಯವಾಗಿ ತೊಟ್ಟಿಲಶಾಸ್ತ್ರದ ದಿನ ಮನೆದೇವರು ಕುಲದೇವರ ಪೂಜೆಯು ಇರುತ್ತದೆ. ಅಂದು ಊರಿನ ಜನರನ್ನೆಲ್ಲ ಕರೆಯುತ್ತಾರೆ. ಸಾಮಾನ್ಯವಾಗಿ ಹೆಂಗಸರು ಈ ಶಾಸ್ತ್ರಕ್ಕೆ ಉಪಸ್ಥಿತರಿರುತ್ತಾರೆ. ಮಗುವಿನ ಸೋದರತ್ತೆ ಬರುವವರೆಗೆ ಸಮಾರಂಭ ಆರಂಭಿಸುವುದಿಲ್ಲ. ಹತ್ತು ದಿನಗಳವರೆಗೆ ಬಿದಿರಿನ ಮರದ ಸುಪ್ಪತ್ತಿಗೆಯಲ್ಲಿ ಮಲಗಿದ್ದ ಮಗು ಅಂದು ತೊಟ್ಟಿಲಲ್ಲಿ ಮಲಗಲು ಸಿದ್ಧವಾಗುತ್ತದೆ. ತೊಟ್ಟಿಲಿಗೆಲ್ಲ ಹೂವುಗಳಿಂದ ಸಿಂಗರಿಸುತ್ತಾರೆ. ಮಗುವಿನ ಸೋದರತ್ತೆ ತುಳಿಸಿ ಪೂಜೆ ಮಾಡಿ ತೊಟ್ಟಿಲು ಪೂಜೆ ಮಾಡಿ ಮಗುವನ್ನು ಅದರಲ್ಲಿ ಮಲಗಿಸುತ್ತಾರೆ. ಆಗ ಅಲ್ಲಿ ನೆರದಿದ್ದವರು ಹಾಡು ಹೇಳುತ್ತಾರೆ. ಅನಂತರ ಹೆಸರು ಕರೆಯುವುದು ಜೋಯಿಸರು ಸೂಚಿಸಿದ ಹೆಸರನ್ನು ಗಟ್ಟಿಯಾಗಿ ಉಚ್ಚರಿಸುತ್ತಾರೆ ಅಂದು ಬಂದ ಸಂಬಂಧಿಕರು ಮಗುವಿಗೆ ಉಡುಗೊರೆಗಳನ್ನು ಕೊಡುತ್ತಾರೆ. ಅಂದು ಮನೆಯಲ್ಲಿ ಬಗೆಬಗೆಯ ತಿಂಡಿ ಮಾಡಿ ವಿಶೇಷವಾದ ಅಡುಗೆ ಮಾಡುತ್ತಾರೆ. ಇಂದು ಇಂತಹ ಎಷ್ಟೋ ಆಚರಣೆಗಳು ಮಾಯವಾಗುತ್ತಿರುವುದನ್ನು ನೋಡಬಹುದು.

**ಬಾಣಂತಿಯ ಆರೈಕೆ:** ತೊಟ್ಟಿಲು ಶಾಸ್ತ್ರ ಮುಗಿದ ದಿನದಿಂದ ಆಕೆ ಸ್ವಲ್ಪ ಸ್ವಲ್ಪವೇ ಓಡಾಡಬಹುದು. ಇತರರಂತೆ ಆಹಾರವನ್ನು ಸೇವಿಸಬಹುದು. ಮಾಂಸಾಹಾರಿಗಳು ಮಾಂಸ, ಮೀನು ಕೊಡುತ್ತಾರೆ. ದಿನವೂ ಬಿಸಿನೀರಿನಲ್ಲಿ ಸ್ನಾನ ಮಾಡಿಸುತ್ತಾರೆ. ಹೊಟ್ಟೆ ಉಬ್ಬಸಬಾರದೆಂದು ಹೊಟ್ಟೆಗೆ ಬಟ್ಟೆ ಬಿಗಿದು ಕಟ್ಟಲಾಗುವುದು. ಅವರನ್ನು ಮಲಗಿಸಿ ಪೂರ್ಣ ದೇಹಕ್ಕೂ ಕಂಬಳಿಯನ್ನು ಹೊದಿಸಿ ಚೆನ್ನಾಗಿ ಬೆಚರುವಂತೆ ಮಾಡುತ್ತಾರೆ.

ತಣ್ಣನೆಯ ಗಾಳಿ ಸೋಕಿದರೆ ಸೀತ, ನೆಗಡಿಯಾಗಬಾರದೆಂದು ಮುಂಜಾಗ್ರತೆ ವಹಿಸುತ್ತಾರೆ. ಹೀಗೆ ಮಗುವಿಗೂ ಅದರದೇ ಆದ ಕೆಲವು ಆರೈಕೆ ಮಾಡುತ್ತಾರೆ.

ಬಾಣಂತಿಯನ್ನು ಊದು ತಿಂಗಳು ತುಂಬಿದ ಮೇಲೆ ಮಗುವಿನ ಜತೆಯಲ್ಲಿ ಗಂಡನ ಮನೆಗೆ ಕಳುಹಿಸುತ್ತಾರೆ. ಕೆಲವರು ಒಂಬತ್ತು ತಿಂಗಳಿಗೆ ಕಳುಹಿಸುತ್ತಾರೆ. ಹಾಗೆ ಕಳುಹಿಸುವ ಮುಂಚೆ ಮಗುವಿಗೆ ಕಿವ ಚುಚ್ಚುವುದು, ಕತ್ತಿಗೆ ಚಿನ್ನದ ಸರವನ್ನು ಕಾಲಿಗೆ, ಸೊಂಟಕ್ಕೆ ಬೆಳ್ಳಿಯ ಒಡವೆ ತರುವುದು ವಾಡಿಕೆಯಾಗಿದೆ. ಮಗುವಿಗೆ ದೃಷ್ಟಿಯಾಗದಂತೆ ಅದರ ಕೈಗೆ ಬಿಳಿಮಣಿ, ಕರಿಮಣಿ, ಹಾಲುಮಣಿ ಎಂಬುವುಗಳನ್ನು ಒಂದು ದಾರಕ್ಕೆ ಪೋಣಿಸಿ ಹಾಕುತ್ತಾರೆ. ಕೊರಳಿಗೆ ದೃಷ್ಟಿಯುಂಗುರ ಹಾಕುತ್ತಾರೆ. ಗಂಡನ ಮನೆಯಲ್ಲಿ ಮುತ್ತೈದೆಯರು ಬಾಣಂತಿ ಮಗುವನ್ನು ಹೃತ್ಪೂರ್ವಕವಾಗಿ ಬರಮಾಡಿಕೊಂಡು ದೃಷ್ಟಿ ತೆಗೆದು ವ್ಯಕ್ತಪಡಿಸುತ್ತಾರೆ.

**ಒಸಗೆಯಲ್ಲಿ:** ಈ ಗ್ರಾಮದಲ್ಲಿ ಹುಡುಗಿ ಪ್ರಾಯಕ್ಕೆ ಬಂದರೆ ಅವಳಿಗೆ ಒಸಗೆಯನ್ನು ಮಾಡುತ್ತಾರೆ. ಇದನ್ನೇ ಗುಡ್ಲು ಕೂರಿಸುವುದು, ದೊಡ್ಡವಳಾಗುವುದು, ಹೆಣ್ಣಾಗುವುದು, ಮೈನೆರೆಯುವುದು ಎಂದೆಲ್ಲ ಕರೆಯುತ್ತಾರೆ. ಹೆಣ್ಣಿಗೆ ನಿಜವಾದ ಅರ್ಹತೆಗಳು ದೊರೆಯಬೇಕಾದರೆ ಅಕೆ ದೊಡ್ಡವಳಾಗಲೇಬೇಕು ಎಂಬ ಮಾತಿದೆ. ಪೂರ್ವದಲ್ಲಿ ಬಹಳ ನಿಧಾನಕ್ಕೆ ಋತುಮತಿಯಾಗುತ್ತಿದ್ದರೆಂದು ಹಿರಿಯರು ಹೇಳುತ್ತಾರೆ. ಇಂದು ಹವಾಮಾನಕ್ಕೆ ಅನುಗುಣವಾಗಿ ಪ್ರಕೃತಿ ಸಹಜವಾಗಿ ಹನ್ನೆರಡು- ಹದಿಮೂರನೆಯ ವಯಸ್ಸಿಗೆ ಋತುಮತಿಯಾಗುತ್ತಾರೆ ಇಂತಹ ಸಂದರ್ಭದಲ್ಲಿ ಹುಡುಗಿಯನ್ನು ಮಾತನಾಡಿಸಿದರೂ ಮಾತನಾಡದೆ ನಾಚಿಕೆ, ವಿಸ್ಮಯಗಳಿಂದ ಮೌನವಾಗಿ ಪರಿತಪಿಸುತ್ತಾಳೆ. ಅವಳ ವರ್ತನೆಯನ್ನು ಕಂಡ ತಾಯಿ ಎನೆಂದು ತಿಳಿದು ಸಂತಸದಿಂದ ಮನೆಯ ಅಕ್ಕಪಕ್ಕದವರಿಗೆಲ್ಲ ವಿಷಯ ತಿಳಿಸುತ್ತಾಳೆ. ಸಂತೊಷದ ಸುದ್ಧಿ ಊರಿನ ತುಂಬ ವ್ಯಾಪಿಸಿ ಹೆಂಗಸರು ಬರುತ್ತಾರೆ. ಆಕೆಯ ಸೋದರಮಾವ, ಹತ್ತಿ, ಹಲಸು, ಆಲದ ಮರಗಳ ಕೊಂಬೆಗಳನ್ನು ಕತ್ತರಿಸಿ ತಂದು ಅದರಿಂದ ಗುಡಿಸಲು ಮಾಡಿ ಅದರೊಳಗೆ ಕುಳಿತುಕೊಳ್ಳಲು ಹೇಳುತ್ತಾರೆ. ಫಲ ಕೊಡುವ ಹಣ್ಣಿನ ಮರಗಳಂತೆ ಈಕೆಯೂ ಮುಂದೆ ಫಲಕೊಡುತ್ತಾಳೆಂದು ಸೂಚಿಸಲು ಇಂತಹ ಮರಗಳನ್ನು ತರುತ್ತಾರೆ ಎಂದು ಜನಪದರು ನಂಬಿದ್ದಾರೆ.

ಋತುಮತಿಯಾದ ಹೆಣ್ಣಿಗೆ ಐದು ಜನ ಮುತ್ತೈದೆಯರು ಎಣ್ಣೆ ನೀರು ಹಾಕಿ ಸ್ನಾನ ಮಾಡಿಸುತ್ತಾರೆ. ಎಲ್ಲರೂ ಸಾಮೂಹಿಕವಾಗಿ ಹಾಕಿಕೊಂಡು ನೀರೆರೆಯುತ್ತಾರೆ. ಹೀಗೆ ಸಂಭ್ರಮದಿಂದ ನೀರೆರೆದು ಶಾಸ್ತ್ರ ಮಾಡುತ್ತಾರೆ. ಆಕೆಗೆ ಸೀರೆ, ಒಡವೆಗಳನ್ನು ಉಡಿಸಿ, ತೊಡಿಸಿ ಹೊಸ ಚಾಪೆಯೊಂದನ್ನು ಹಾಸಿ ಕೂರಿಸುತ್ತಾರೆ. ಅದು ಮನೆಯ ಹೊರಭಾಗದ ಕೊಠಡಿಯಲ್ಲಿ ಹೆಣ್ಣು ಋತುಮತಿಯಾದಾಗಲೂ ಸೂತಕವನ್ನು

ಮಾಡುತ್ತಾರೆ. ಅಕೆ ಆದ ದಿನದಿಂದ ಸೂತಕ ಕಳೆಯುವವರೆಗೂ ದೇವರಮನೆ, ಅಡುಗೆ ಮನೆಗಳಿಗೆ ಪ್ರವೇಶಿಸುವಂತಿಲ್ಲ. ಒಕ್ಕಲಿಗರಲ್ಲಿ ಹದಿನಾರು ದಿನಗಳ ಕಾಲ ಸೂತಕವಾದರೆ ಬ್ರಾಹ್ಮಣರಲ್ಲಿ ಐದು ದಿನಕ್ಕೆ ಮುಗಿಯುತ್ತದೆ. ಬ್ರಾಹಣರಲ್ಲಿ ಈ ರೀತಿ ಗುಡಿಸಲು ಹಾಕುವುದಿಲ್ಲ. ಹೆಣ್ಣಾದ ಹುಡುಗಿಗೆ ಅಷ್ಟು ದಿನಗಳವರೆಗೂ ಎಳ್ಳು, ಕೊಬ್ಬರಿ, ಚಿಗಳಿ, ತಂಬಿಟ್ಟು ಹೆಚ್ಚಾಗಿ ಕೊಡುತ್ತಾರೆ. ಕೆಲದಿನಗಳ ನಂತರ ಮೆಂತ್ಯದ ಹಿಟ್ಟು, ತುಪ್ಪ, ಅನ್ನ, ಕೊಡುತ್ತಾರೆ. ಅನಂತರ ಮಾಂಸಾಹಾರವನ್ನು ಕೊಡುತ್ತಾರೆ.

ಹೆಣ್ಣು ಮೈನೆರೆದು ಆಕೆಯನ್ನು ಕೆಲವು ದಿನಗಳು ಆರೈಕೆ ಮಾಡಿ ಒಂದು ಒಳ್ಳೆಯ ದಿನ ನೋಡಿ 'ದೊಡ್ಡ ಒಸಗೆ' ಎಂದು ಮಾಡುತ್ತಾರೆ. ಕೆಲವರು ಈ ಕಾರ್ಯವನ್ನು ಮದುವೆಯಂತೆಯೇ ಬಹಳ ವೈಭವದಿಂದ ಆಚರಿಸುತ್ತಾರೆ. ಇಂದು ಅಂತಹ ಪದ್ಧತಿಗಳು ಕಡಿಮೆಯಾಗಿವೆ. ಕೇವಲ ಹಳ್ಳಿಗಳಲ್ಲಿ ಅಲ್ಲೊಂದು ಇಲ್ಲೊಂದನ್ನು ನೋಡಬಹುದು ಸಂಬಂಧಿಕರನ್ನೆಲ್ಲ ಆಹ್ವಾನಿಸುತ್ತಾರೆ. ಕನ್ಯೆಯ ಸೋದರ ಮಾವಂದಿರು ಮತ್ತು ಅಕ್ಕಂದಿರು ಉಡುಗೊರೆಗಳನ್ನು ಹೆಚ್ಚಾಗಿ ತಂದಿರುತ್ತಾರೆ. ಆಕೆಯನ್ನು ಮಡಿಲು ತುಂಬುವ ಕಾರ್ಯ ನೋಡಲು ಚೆಂದ. ಉತ್ತುತ್ತೆ, ದ್ರಾಕ್ಷಿ, ಗೋಡಂಬಿ, ಕಾಯಿ, ಕೊಬ್ಬರಿ, ಸೀರೆ, ರವಿಕೆ ಇತ್ಯಾದಿಗಳನ್ನು ಒಂದು ವಸ್ತ್ರದಲ್ಲಿಟ್ಟು ಅವಳ ಮಡಿಲಿಗೆ ಕಟ್ಟುತ್ತಾರೆ. ಅನಂತರ ಬಂದವರು ಅಕ್ಷತೆ ಹಾಕಿ ಹಾರೈಸುತ್ತಾರೆ. ಹೆಣ್ಣು ತನಗಿಂತ ಹಿರಯರಾದವರ ಪಾದ ಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾಳೆ.

ಹೀಗೆ ಪುಷ್ಪವತಿಯಾದ ಹೆಣ್ಣುಮಗಳು ಮುಂದೆ ಮೂರು ಅಥವಾ ನಾಲ್ಕು ತಿಂಗಳು ಮನೆಯ ಹೊರಗೆ ಬರುವುದಿಲ್ಲ ಮತ್ತೆ ತಿಂಗಳಿಗೊಮ್ಮೆ ಬಹಿಷ್ಠೆಯಾದಾಗ ಮನೆಯ ಹೊರಕೋಣೆಯಲ್ಲಿರಬೇಕು. ಇಂದು ಇಂತಹ ಸಂಪ್ರದಾಯಗಳೂ ಕಟ್ಲೆಕಟ್ಟಲೆಗಳೆಲ್ಲ ದೂರವಾಗುತ್ತವೆ ಎಂದು ಹೇಳಬಹುದು.

**ಮದುವೆ:** ಮಾನವ ಇತರ ಪ್ರಾಣಿಗಳಂತೆ ಲೈಂಗಿಕ ಪ್ರಚೋದನೆಯನ್ನು ಹೊಂದಿರು–ವನಾದರೂ ವಿವೇಚನೆಯಲ್ಲಿ ಪ್ರಾಣಿಗಳಿಗಿಂತ ಭಿನ್ನವಾಗಿರುತ್ತಾನೆ. ಆದುದರಿಂದಲೇ ಮಾನವ ಸಮಾಜಗಳು ಲೈಂಗಿಕ ಸಂಯೋಗವನ್ನು ವೈಯಕ್ತಿಕ ಅಥವಾ ಜೈವಿಕವೆಂದು ಮಾತ್ರ ಭಾವಿಸದೆ ಸಾಮಾಜಿಕ ಮತ್ತು ನೈತಿಕ ವಿಷಯವೆಂದು ಪರಿಗಣಿಸಲಾಗುತ್ತದೆ. ಅಲ್ಲದೆ ಪ್ರತಿ ಮಾನವ ಸಂಪ್ರದಾಯವೂ ಅಂಗೀಕಾರದ ಸಂಗತಿಗಳ ನಡುವೆ ಉನ್ನತ ಸ್ತರದ ಹಾಗೂ ಸ್ಥಿರವಾದ ಬಂಧನವೊಂದನ್ನು ಅಪೇಕ್ಷಿಸುತ್ತದೆ. ಅದನ್ನೆ 'ಮದುವೆ' ಎಂದು ಕರೆದು ಗಂಡು ಹೆಣ್ಣುಗಳನ್ನು ಒಂದು ವ್ಯವಸ್ಥಿತ ಕುಟುಂಬ ಜೀವನಕ್ಕೆ ಒಳಪಡಿಸುತ್ತದೆ.

ಜೀವನದಲ್ಲಿ ಒಮ್ಮೆ ಮಾತ್ರ ಆಗುವಂತಹ ಅಥವಾ ಘಟಿಸಬಹುದಾದಂತಹ ವಿವಾಹಕ್ಕೆ ಹೆಚ್ಚು ಮಹತ್ವವಿದೆ. ನಾಗರಿಕತೆಯು ಬೆಳೆಯುವುದಕ್ಕಿಂತ ಮುಂಚಿನಿಂದ

ಇದ್ದಂತಹ ಬಾಲ್ಯವಿವಾಹ ಪದ್ಧತಿಯು ಇಂದು ಅದು ರೂಢಿಯಲ್ಲಿದೆ. ಶಾಸ್ತ್ರೋಕ್ತವಾಗಿ ಮದುವೆ ನಡೆಯುವಾಗ ಮೊಟ್ಟಮೊದಲು ಮಧ್ಯವರ್ತಿಯೊಬ್ಬರಿಂದ ತಮಗೆ ಇಷ್ಟವಾಗುವ ಸಂಬಂಧದ ಕನ್ಯೆಯ, ಕುವರನ ಕುಲ, ಗೋತ್ರ ಮುಂತಾದ ವಂಶ ವಿಚಾರಗಳನ್ನು ಔಪಚಾರಿಕವಾಗಿ ತಿಳಿದುಕೊಳ್ಳುವ ಸಂಪ್ರದಾಯವಿದೆ. ಇಬ್ಬರ ಸಾಮ್ಯ ಕೂಡಿಬಂದರೆ ಕನ್ಯೆಯನ್ನು ನೋಡಲು ವರನ ಕಡೆಯವರನ್ನು ಕರೆದುಕೊಂಡು ಬರುತ್ತಾರೆ.

**ಹೆಣ್ಣು ನೋಡುವುದು:** ಮದುವೆ ಶಾಸ್ತ್ರದ ಮೊದಲ ಕಾರ್ಯ ಹೆಣ್ಣು ನೋಡುವುದರಿಂದಲೇ ಪ್ರಾರಂಭವಾಗುತ್ತದೆ. ವಾಸ್ತವವಾಗಿ ಇದೇನೋ ಶಾಸ್ತ್ರಚಾರವಲ್ಲದಿದ್ದರೂ ಒಂದು ಆರಂಭದ ಅಗತ್ಯ ಕಾರ್ಯಕ್ರಮವಾಗಿರುತ್ತದೆ. ಈ ಸಮಯದಲ್ಲಿ ವರನ ಕಡೆಯವರು ಬಂದರೆ ವಿಶೇಷವಾದ ರೀತಿಯಲ್ಲೇನೋ ಸತ್ಕರಿಸುವುದಿಲ್ಲ. ಮೊದಲು ಸಾಮಾನ್ಯವಾಗಿ ಗಂಡಿನ ಕಡೆಯವರು ಕೆಲವೊಮ್ಮೆ ಗಂಡಿನ ಜೊತೆಗೆ ಬಂದು ಹೆಣ್ಣು ನೋಡುತ್ತಾರೆ. ಅಂದು ಅವರಿಗೆ ವಿಶೇಷ ಉಪಚಾರವೇನೂ ಇರುವುದಿಲ್ಲ. ತಿಂಡಿ, ಕಾಫಿ ಅಷ್ಟೇ. ನೋಡಿಕೊಂಡು ಹೋದಮೇಲೆ ಎರಡೂ ಮನೆಯವರು ವದುವರರ ಅಂದ, ಚೆಂದ, ಉದ್ಯೋಗ, ಕುಟುಂಬ, ಮನೆತನ ಮುಖ್ಯವಾಗಿ ಸಾಲಾವಳಿ ಕೂಡಿ ಬಂದು ತಮಗೆ ಇಷ್ಟವಾದರೆ ಗಂಡಿನವರು ಹೆಣ್ಣಿನ ಮನೆಗೂ ಹೆಣ್ಣಿನವರು ಗಂಡಿನ ಮನೆಗೂ ಕೆಲವು ಆಪ್ತ ಬಂಧುಗಳೊಂದಿಗೆ ಪರಸ್ಪರ ಮನೆಗಳಿಗೆ ಭೇಟಿ ಕೊಟ್ಟು ತಮಗೆ ಒಪ್ಪಿಗೆಯಾದ ಮೇಲೆ ಮುಂದಿನ ಕಾರ್ಯಕ್ಕೆ ತಯಾರಿ ನಡೆಸುತ್ತಾರೆ. ಈ ಎಲ್ಲಾ ಕಾರ್ಯ ಮಾಡುವಾಗಲೂ ದಿನ, ಗಳಿಗೆ, ನಕ್ಷತ್ರ ಎಲ್ಲವನ್ನು ನೋಡಿಕೊಂಡು ಮಾಡುತ್ತಾರೆ. ಇಂತಹದ್ದು ಸಾಮಾನ್ಯವಾಗಿ ಎಲ್ಲ ಜಾತಿಯವರಲ್ಲೂ ನಡೆಯುತ್ತದೆ. ಹೀಗೆ ಎಲ್ಲರಿಗೂ ಒಪ್ಪಿಗೆಯಾದ ಮೇಲೆ ಒಂದು ದಿನ ಅರಿಶಿ-ಕುಂಕುಮ ಕೊಡುವುದನ್ನು ಇಟ್ಟುಕೊಳ್ಳುತ್ತಾರೆ. ನಿಗದಿ ಮಾಡಿಕೊಂಡ ದಿನ ಗಂಡಿನವರು ಹೆಣ್ಣಿನ ಮನೆಗೆ ತಮ್ಮ ಬಳಗವನ್ನು ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಅವರು ಪರಸ್ಪರರು ಕೊಡುವುದು ತೆಗೆದುಕೊಳ್ಳುವುದು ಮಾತನಾಡಿಕೊಂಡು ನಿಶ್ಚಿತಾರ್ಥದ ದಿನ ಮತ್ತು ಮದುವೆಯ ದಿನವನ್ನು ಜೋಯಿಸರಿಂದ ಸರಿಯಾಗಿ ತಿಳಿದುಕೊಂಡು ತೀರ್ಮಾನಿಸುತ್ತಾರೆ.

**ನಿಶ್ಚಿತಾರ್ಥ:** ಇದನ್ನು 'ವಿಳ್ಳೇಶಾಸ್ತ್ರ' ಎಂದೂ ಕರೆಯುತ್ತಾರೆ. ಇದನ್ನು ಕೆಲವರು ಅದ್ದೂರಿಯಾಗಿಯೆ ಮಾಡುತ್ತಾರೆ. ಕೆಲವರು ಸಾಮರ್ಥ್ಯಕ್ಕೆ ತಕ್ಕಂತೆ ಮಾಡುತ್ತಾರೆ. ಈ ಶಾಸ್ತ್ರ ಮಾಡಿದರೆ ಅರ್ಧ ಮದುವೆ ಮುಗಿಯಿತು ಎಂದೆ ತಿಳಿಯುತ್ತಾರೆ. ಆ ದಿನ ಗಂಡಿನ ಕಡೆಯವರು ಹೆಣ್ಣಿಗೆ ಸೀರೆ, ರವಿಕೆ, ಉಂಗುರ, ಅರಿಶಿನ, ಕುಂಕುಮ, ಹೂವು, ಒಂದು ಚಿಪ್ಪು ಬಾಳೆಹಣ್ಣು, ಬೆಲ್ಲ, ಕೊಬ್ಬರಿ, ಕಡ್ಲೆ ತೆಂಗಿನಕಾಯಿ, ಅಕ್ಕಿ ಮುಂತಾದ

ಪ್ರಮುಖ ವಸ್ತುಗಳನ್ನು ಸಂಪ್ರದಾಯಕ್ಕನುಗುಣವಾಗಿ ತೆಗೆದುಕೊಂಡು ಹೋಗುತ್ತಾರೆ. ಹೆಣ್ಣಿನವರು ಗಂಡಿಗೆ ಬಟ್ಟೆ, ಉಂಗುರು ತಂದು ಇಬ್ಬರ ಕೈಗೂ ತೊಡಿಸಿ ಹಾರ ಬದಲಾಯಿಸುತ್ತಾರೆ. ಅನಂತರ ಊಟದ ವ್ಯವಸ್ಥೆಯಿರುತ್ತದೆ. ನಿಶ್ಚಿತಾರ್ಥವಾದ ಮೇಲೆ ಹೆಣ್ಣು-ಗಂಡಿನವರು ಜೋಯಿಸರ ಬಳಿ ಹೋಗಿ ಲಗ್ನವನ್ನು ಕಟ್ಟಿಸುತ್ತಾರೆ. ಅಂದರೆ ಲಗ್ನಕ್ಕೆ ಇನ್ನು ನಾಲ್ಕೈದು ದಿನ ಇದ್ದ ಹಾಗೆಯೇ ನಡೆಯುತ್ತದೆ. ಇನ್ನು ಕೆಲವರು ಮದುವೆಯ ದಿನವೇ ಲಗ್ನ ಕಟ್ಟಿಸುತ್ತಾರೆ. ಲಗ್ನ ಪತ್ರಿಕೆಯನ್ನು ಎರಡೂ ಕಡೆಯವರು ತಮ್ಮ ತಮ್ಮ ಬಂಧು ಬಳಗಕ್ಕೆಲ್ಲ ಕೊಟ್ಟು ಅವರನ್ನೆಲ್ಲ ಆಹ್ವಾನಿಸುತ್ತಾರೆ. ಎರಡೂ ಮನೆಗಳಲ್ಲಿ ಬಟ್ಟೆ ಬರೆ ಒಡವೆ ಇತ್ಯಾದಿ ವಸ್ತುಗಳನ್ನು ಭರ್ಜರಿಯಾಗಿಯೇ ಖರೀದಿ ಮಾಡುತ್ತಾರೆ.

"ಮನೆ ಕಟ್ಟಿನೋಡು, ಮದುವೆ ಮಾಡಿ ನೋಡು" ಎಂಬ ಗಾದೆಯಂತೆ ಹೆಣ್ಣು ಹೆತ್ತ ತಂದೆತಾಯಿಗಳಿಗೆ ಹೆಣ್ಣು ಮಕ್ಕಳನ್ನು ಮದುವೆಮಾಡಿ ಕಳುಹಿಸುವ ಹೊತ್ತಿಗೆ ಅರ್ಧ ಸೋತು ಹೋಗಿರುತ್ತಾರೆ. ಸ್ಥಿತಿವಂತಾದರೆ ಪರವಾಗಿಲ್ಲ. ಬಡವರಾದರೆ ಅವರ ಕಷ್ಟ ಹೇಳತೀರದು. ಹಿಂದೆ ಮದುವೆ ಎಂದರೆ ವಾರಗಟ್ಟಲೆ ನಡೆಯುತ್ತಿದ್ದವು. ಇಂದು ಅದು ಮೂರು ದಿನಗಳಿಗೆ ಇಳಿದರೆ.

**ಮದುವೆಯ ಹಿಂದಿನ ದಿನ:** ಈ ದಿನ ಕೂಡ ಮದುವೆಯ ದಿನದಷ್ಟೇ ಮುಖ್ಯವಾಗಿರುತ್ತದೆ. ಆ ದಿನವೇ ನೆಂಟರಿಷ್ಟರು ಬಂದು ಸೇರುತ್ತಾರೆ. ಮದುವೆಗೆ ಅಗತ್ಯವಾದ ವಸ್ತುಗಳನ್ನು ಅಂದೇ ಸಿದ್ಧಪಡಿಸಿಕೊಳ್ಳುತ್ತಾರೆ. ಅಂದು ಅನೇಕ ಶಾಸ್ತ್ರಗಳು ನಡೆಯುತ್ತವೆ ಅಂದು ಮೊದಲು ಊರಿನವರೆಲ್ಲ ಸೇರಿಕೊಂಡು ಗಂಡು, ಹೆಣ್ಣು ಮನೆಗಳ ಮುಂದೆ ಹನ್ನೆರಡು ಕಂಬಗಳಿಂದ ಕೂಡಿದ ಚಪ್ಪರಗಳನ್ನು ನಿರ್ಮಿಸುತ್ತಾರೆ. ಚಪ್ಪರ ನಿಮಾಣದ ಕಾರ್ಯದ ಸಲುವಾಗಿ ಊರಿನ ಪಾಕಶಾಸ್ತ್ರ ಪರಿಣಿತರು "ಚಪ್ಪರ ಊಟ'ವನ್ನು ಸಿದ್ಧಗೊಳಿಸುತ್ತಾರೆ. ಚಪ್ಪರವನ್ನು ಮಂಗಳವಾರ, ಶನಿವಾರ ಹಾಕುವುದಿಲ್ಲ. ಹಾಗೆ ಬಂದರೆ ಒಂದು ದಿನ ಮೊದಲೇ ಹಾಕುತ್ತಾರೆ. ಚಪ್ಪರಕ್ಕೆ ತೆಂಗಿನಗರಿ, ಮಾವು, ಹಲಸಿನ ಸೊಪ್ಪನ್ನು ಹಕುತ್ತಾರೆ. ಚಪ್ಪರಕ್ಕೆ ಮುತ್ತೈದೆಯರು ಪೂಜೆ ಮಾಡುತ್ತಾರೆ. ವಧುವರರ ಕೈಯಿಂದಲೂ ಪೂಜೆ ಮಾಡಿರುತ್ತಾರೆ. ಅಂದು ರಾತ್ರಿ ಮದುವೆಯ ವಧುವರರಿಗೆ ಮನೆಗಳಲ್ಲಿ ಮೊದಲನೆಯ ಸಂಭ್ರಮ. ಇಂದು ಹೆಚ್ಚು ಮದುವೆಗಳು ಕಲ್ಯಾಣಮಂಟಪಗಳಲ್ಲಿ ಜರುಗುವುದರಿಂದ ತಾಯಿಹಸೆ ಅಥವಾ ಮೊದಲಹಸೆಯನ್ನು ಮನೆಯಲ್ಲೇ ಹಾಕಿಕೊಂಡು ಅನಂತರ ಉಳಿದ ಶಾಸ್ತ್ರಗಳನ್ನು ಅಲ್ಲಿ ಮಾಡುತ್ತಾರೆ. ಹೆಣ್ಣು, ಗಂಡನ್ನು ಹೊಸಬಟ್ಟೆಯಲ್ಲಿ ಹಸೆಮಾಣೆಯ ಮೇಲೆ ಕೂರಿಸಿ ಅವರ ಮುಂದೆ ಕಳಸ, ಕಾಯಿ, ಕೊಬ್ಬರಿ, ಹಣ್ಣು, ಆರತಿ ಇಟ್ಟು ಆಕೆಗೆ ಅಕ್ಕಿಯನ್ನಿಟ್ಟು ಐದು ಜನ ಮತ್ತೈದೆಯರು ಆ ಶಾಸ್ತ್ರ ಮಾಡುತ್ತಾರೆ.

ಅದೇ ದಿನ ರಾತ್ರಿ ಗಂಡುಹೆಣ್ಣುಗಳು ಮನೆಗಳ ಗೋಡೆಯ ಮೇಲೆ 'ಹಸೆಗೋಡೆ' ಬರೆಸಲಾಗುತ್ತದೆ. ನಡುಮನೆಯ ನಡುಗೋಡೆಯ ಮೇಲೆ ಒಂದು ಗಂಡು ಮತ್ತೊಂದು ಹೆಣ್ಣನ್ನು ಸಾಂಕೇತಿಸುವ ಎರಡು ಚಿತ್ರಗಳನ್ನು ಕಲಾತ್ಮಕವಾಗಿ ಬಣ್ಣದಿಂದ ಚಿತ್ರಿಸಲಾಗುತ್ತದೆ. ಈ ಚಿತ್ರದ ಕೆಳಗೆ 'ಜಾಗ್ರ' ಎಂದು ಮಾಡಿರುತ್ತಾರೆ. ಅಂದರೆ ಹದಿನೈದು ದಿನದ ಹಿಂದೆಯೇ ಒಂದು ದೊಡ್ಡ ಮಣೆಗೆ ಮಣ್ಣು, ಗೊಬ್ಬರ ಹರಡಿ ಅದಕ್ಕೆ ರಾಗಿ, ಭತ್ತ, ಜೋಳ ಇತರ ದ್ವಿದಳ ದಾನ್ಯಗಳನ್ನು ಪ್ರತಿದಿನ ಅದರ ಪೋಷಣೆ ಮಾಡುತ್ತಾರೆ. ಮದುವೆಯ ವೇಳೆಗೆ ಅದು ಹುಲುಸಾಗಿ ಬೆಳೆಯುತ್ತದೆ. ಆ ಹುಲ್ಲಿನ ಮದ್ಯೆ ಗಂಗೆಯಿಂದ ತಂದ ನೀರಿನ ಮಡಕೆಯನ್ನು ಇಟ್ಟು ಅದಕ್ಕೆ ಮುಚ್ಚುಳ ಮುಚ್ಚಿ ಅದರ ಮೇಲೆ ದೀಪವನ್ನು ಇಡುತ್ತಾರೆ. ಅದನ್ನು ನೊಡಲು ಆಕರ್ಷಕವಾಗಿರತ್ತದೆ.

**ಬಳೆಶಾಸ್ತ್ರ:** ಅಂದು ಹೆಣ್ಣಿನ ಮನೆಯಲ್ಲಿ ಮದುಮಗಳು ಸೇರಿದಂತೆ ಬಂಧು ಬಳಗದವರೆಲ್ಲ ಕರಿಬಳೆಯನ್ನು ತೊಡಿಸುತ್ತಾರೆ. ಮೊದಲು ವಧು 'ಬಳೆಮಲಾರ' ಕೈ ಪೂಜೆ ಮಾಡುತ್ತಾಳೆ. ಬಳೆಗಾರಮ್ಮ ಶಾಸ್ತ್ರೋಕ್ತವಾಗಿ ವಧುವಿಗೆ ಕರಿಯದುಂಡು ಬಳೆಯನ್ನು ಕೈತುಂಬಾ ತೊಡಿಸುತ್ತಾಳೆ. ಉಳಿದ ಮುತ್ತೈದೆಯರಿಗೂ ಶಾಸ್ತ್ರದ ಬಳೆ ತೊಡಿಸುತ್ತಾರೆ. ಬಳೆಗಾರರಿಗೆ ನಿಗದಿಯಾದ ಹಣವನ್ನು ಹೆಚ್ಚಿನ ಮನೆಯವರೇ ಕೊಡುತ್ತಾರೆ.

**ಅರಿಶಿನ ಶಾಸ್ತ್ರ:** ಅಂದು ಗಂಡುಹೆಣ್ಣಿನ ಎರಡೂ ಮನೆಗಳಲ್ಲೂ ಅರಿಶಿನ ಶಾಸ್ತ್ರ ಮಾಡುತ್ತಾರೆ. ಐದು ಜನ ಮುತ್ತೈದೆಯರು ಶಾಸ್ತ್ರ ಮಾಡುತ್ತಾರೆ. ಅರಿಶಿನವನ್ನು ಎಲ್ಲರೂ ಹೆಣ್ಣು, ಗಂಡಿಗೆ ಮುಖ, ಕೈ, ಕಾಲುಗಳಿಗೆ ಹಚ್ಚಿ ಶಾಸ್ತ್ರ ಮಾಡುತ್ತಾರೆ. ಹೆಣ್ಣು ಅಂದು ಧರಿಸಿದ್ದ ಬಟ್ಟೆಯನ್ನು ಶಾಸ್ತ್ರ ಮುಗಿದ ಮೆಲೆ ಅಗಸರಿಗೆ ಕೊಡುವ ವಾಡಿಕೆಯಿದೆ. ಈ ಶಾಸ್ತ್ರವಾದ ಮೇಲೆ ಬಿಸಿಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಇಂತಹ ಶಾಸ್ತ್ರಗಳೆಲ್ಲ ರಾತ್ರಿಯಲ್ಲಿ ಆಗುತ್ತದೆ. ಮುಂಜಾನೆಯಲ್ಲಿ ಮದುವೆಯ ಸಂಭ್ರಮ. ಆಗಲೇ ವಾದ್ಯದವರು ತಮ್ಮ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ. ಹಿಂದಿನ ದಿನ ಎರಡು ಮನೆಗಳಲ್ಲಿ ಮದುವೆ ಕಾರ್ಯ ಯಾವ ಅಡೆತಡೆಗಳಿಲ್ಲದೆ ನೆರವೇರಲಿ ಎಂದು ದೇವರನ್ನು ಪೂಜಿಸಿ ದೇವರುಗಳಿಗೆ ಎಡೆ ಇಡುತ್ತಾರೆ. ಮತ್ತು ಆ ದಿನವೂ ಊರಿನವರಿಗೆಲ್ಲ ಊಟದ ವ್ಯವಸ್ಥೆ ಮಾಡುತ್ತಾರೆ.

**ದಿಬ್ಬಣ ಹೊರಡುವುದು:** ವರನ ಮನೆಯಲ್ಲಿ ಈ ಎಲ್ಲ ಕಾರ್ಯಗಳು ಮುಗಿದು ಪ್ರಯಾಣ ಬೆಳೆಸುತ್ತಾರೆ. ಅವರ ಮುಂದೆ ವಾದ್ಯಗಳು ಮೊಳಗುತ್ತಿರುತ್ತವೆ. ಗಂಡಿನ ಜೊತೆ ಅವರ ಬಳಗದವರು ಹೊರಡುತ್ತಾರೆ. ಹೆಣ್ಣಿಗೆ ಬೇಕಾದ ಪ್ರತಿಯೊಂದು ವಸ್ತುವನ್ನು ಜೋಪಾನವಾಗಿಟ್ಟುಕೊಂಡು ಹೋಗುತ್ತಾರೆ. ಗಂಡು ಬಂದ ಕೂಡಲೇ ಹೆಣ್ಣಿನವರು

ಬಂದು ಅವರ ಕ್ಷೇಮಸಮಾಚಾರ ವಿಚಾರಿಸುತ್ತಾರೆ. ಇಂದು ಮಂಟಪಗಳಲ್ಲಿ ಮಾಡುವುದರಿಂದ ಗಂಡೂ ಹಿಂದಿನ ದಿನವೇ ಬಂದಿರುತ್ತಾರೆ. ಆಗಲೂ ಅವರ ಪೂರ್ವಕವಾಗಿಯೇ ಸ್ವಾಗತಿಸುತ್ತಾರೆ. ಗಂಡನ್ನು ಆರತಿ ಬೆಳಗಿ ಕರೆತರುತ್ತಾರೆ. ಕುಕ್ಕೆಗಳನ್ನು ಹೊತ್ತ ಮುತ್ತೈದೆಯರಿಗೂ ಕೂಡ ಆರತಿ ಬೆಳಗಿ ಅವರನ್ನು ಕರೆದು ಮಣೆಯ ಮೆಲೆ ಕುಕ್ಕೆಗಳನ್ನು ಇಳಿಸುತ್ತಾರೆ. ಆನಂತರ ಅವರನ್ನು ಪ್ರತ್ಯೇಕವಾಗಿ ಉಪಚರಿಸಲಾಗುತ್ತದೆ.

**ಧಾರೆಸಮಯ:** ವರ ಈಗಾಗಲೇ ಕಚ್ಚೆ ಪಂಚೆ, ಅಂಗಿ, ತಲೆಗೆ ಜರೀಪೇಟಸುತ್ತಿ, ಬಾಸಿಂಗ ಹಾಕಿ, ಕಾಲಿಗೆ ಕಾಲ್ಮಿಂಚು, ಕೈಗೆ ಉಂಗುರ, ಕತ್ತಿಗೆ, ಕೈಗೆ ಚೈನು, ಹಕಿಕೊಂಡು ಸಿದ್ಧನಾಗಿರುತ್ತಾನೆ. ಹೆಣ್ಣಿಗೂ ಧಾರಾ ಉಡುಪುಗಳನ್ನು ಉಡಿಸಿ ತಲೆಬಾಚಿ, ಮೊಗ್ಗಿನ ಜಡೆ ಹಾಕಿ ಕಾಲಿಗೆ ಗೆಜ್ಜೆ, ಕೊರಳ ತುಂಬ ಚಿನ್ನದ ಸರಗಳು ಹಾಕಿ ಶೃಂಗರಿಸುತ್ತಾರೆ. ಧಾರೆ ಮೂಹೂರ್ತ ಇನ್ನೇನು ಸನ್ನಿಹಿತವಾಯಿತು ಎನ್ನುವಾಗ ಪುರೋಹಿತರ ಸೂಚನೆಯ ಮೇರೆಗೆ ಮೊದಲು ವರನನ್ನು ಕರೆಯುತ್ತಾರೆ. ವಧುವನ್ನು ಅಕೆಯ ಸೋದರಮಾವ ಮನೆಯ ಒಳಗಿನಿಂದ ಹೊತ್ತು ತಂದು ಧಾರೆ ಮಂಟಪದವರೆಗೆ ಕೈಹಿಡಿದು ಕರೆತಂದು ಮೂರು ಸುತ್ತು ಒಳಗಿನಿಂದ ಹೊತ್ತು ತಂದು ಧಾರೆ ಮಂಟಪದವರೆಗೆ ಕೈಹಿಡಿದು ಕರೆತಂದು ಮೂರು ಸುತ್ತು ಸುತ್ತಿಸಿ ಬಲಗೊಂಡು ಮಣೆಯ ಮೆಲೆ ನಿಲ್ಲಿಸುತ್ತಾರೆ. ಮೂಹೂರ್ತಕ್ಕೆ ಸರಿಯಾಗಿ 'ಧಾರೆಶಾಸ್ತ್ರ' ಆರಂಭಗೊಳ್ಳುತ್ತದೆ. ವಧುವರರ ಕೈಗೆ ಅಕ್ಷತೆ ಕೊಟ್ಟು ಮಂತ್ರೋಚ್ಚಾರಣೆ ಗೈಯುತ್ತಾರೆ. ಪರಸ್ಪರರಿಗೆ ಕಂಕಣವಾದ ಕಟ್ಟಿಸುತ್ತರೆ. ಪುರೋಹಿತರು ಗಂಡುಹೆಣ್ಣುಗಳ ಅಂಗೈ ಮೇಲೆ ತೆಂಗಿನ ಫಲವನ್ನಿಟ್ಟು ಅವರ ಮೇಲೆ ವಧುವಿನ ತಂದೆ ತಾಯಿಗಳಿಂದ ಧಾರೆ ಎರೆಸುತ್ತಾರೆ. ಅನಂತರ ಪವಿತ್ರವಾದ ಮಾಂಗಲ್ಯವನ್ನು ಪಂಚ ಮುತ್ತೈದೆಯರ ಹಸ್ತ ಮುಟ್ಟಿಸಿ ಸರಿಯಾದ ಸಮಯಕ್ಕೆ ವರನಿಂದ ವಧುವಿನ ಕೊರಳಿಗೆ ಕಟ್ಟುವಂತೆ ಹೇಳುತ್ತಾರೆ. ಮಾಂಗಲ್ಯ ಧಾರಣೆಯಾಗುವಾಗ ಸಮಸ್ತ ಬಂಧುಗಳೂ ಅಕ್ಷತೆ ಎರಚಿ ಶುಭಕೋರುತ್ತಾರೆ. ಆಗ ವಾದ್ಯಗಳ ಸದ್ದುಗದ್ದಲವನ್ನು ತೀವ್ರಗೊಳಿಸಲಾಗುತ್ತದೆ.

ಧಾರೆ ಶಾಸ್ತ್ರ ಮುಗಿದ ಮೆಲೆ ಪುರೋಹಿತರು ನವದಂಪತಿಗಳಿಗೆ ಸೆರಗು ಗಂಟುಹಾಕಿ ಧಾರೆ ಮಂಟಪದಿಂದಾಚೆ ಕರೆತಂದು ಅರುಂಧತಿ ನಕ್ಷತ್ರ ತೋರಿಸುತ್ತಾ ನಮಸ್ಕರಿಸಲು ಹೇಳುತ್ತಾರೆ. ಅನಂತರ ಗಂಡುಹೆಣ್ಣಿನ ಪಾದಪೂಜೆಯಾಗುತ್ತದೆ. ಇದೆಲ್ಲ ಮುಗಿದ ಮೇಲೆ ಆರತಕ್ಷತೆಯನ್ನು ಇಡುತ್ತಾರೆ. ಬೇರೆ ಉಡುಗೆಗಳನ್ನೂ ತೊಡುಗೆಗಳನ್ನು ತೊಡಿಸಿ ಕೂರಿಸಲಾಗುತ್ತದೆ ಬಂದವರು ಉಡುಗೊರೆಗಳನ್ನು ಕೊಟ್ಟು ಹರಸುತ್ತಾರೆ. ಇದರ ಮಧ್ಯೆ ಊಟ ಉಪಚಾರಗಳು ನಡೆಯುತ್ತಿರುತ್ತವೆ ಸಂಜೆಯ ಹೊತ್ತಿಗೆ ಎಲ್ಲ ಕೆಲಸಗಳನ್ನು ಮುಗಿಸಿ ವರದ ಮನೆಗೆ ವಧುವನ್ನು ಕಳುಹಿಸುವುದು.

ಇದಕ್ಕೆ ಮುಂಚೆ 'ವೀಳ್ಯಾ ತಿದ್ದುವ ಶಾಸ್ತ್ರ' ಆಚರಿಸುತ್ತಾರೆ ಅನಂತರ ಗಂಡು ಹೆಣ್ಣುಗಳನ್ನು ಕಳುಹಿಸಲು ಜನ ನೆರೆದಿರುತ್ತಾರೆ. ಈ ಸಮಯುದಲ್ಲಿ ಹೆಣ್ಣು, ಹೆಣ್ಣಿನ ತಾಯಿ–ತಂದೆ ಕುಟುಂಬದವರು ಸಂಕಟದಿಂದ, ದುಃಖದಿಂದ ನಿಂತಿರುತ್ತಾರೆ. ಗಂಡಿನ ತಂದೆ ಹೆಣ್ಣಿನ ತಂದೆ ತಮ್ಮ ಮಕ್ಕಳನ್ನು ಪರಸ್ಪರರು ಚೆನ್ನಾಗಿ ನೋಡಿಕೊಳ್ಳಬೇಕೆಂದು ಕೇಳಿಕೊಳ್ಳುತ್ತಾರೆ. ಅನಂತರ ಮದುವೆ ದಿಬ್ಬಣ ಹೊರಡುತ್ತದೆ.

**ಸೇರು ಒದೆಯುವದು:** ಗಂಡಿನ ಮನೆಗೆ ಬಂದಾಗ ಇಲ್ಲೂ ಕೆಲವು ಶಾಸ್ತ್ರಗಳನ್ನು ಮಾಡಿಸುತ್ತಾರೆ. ಮನೆಗೆ ಹೋಗುವ ಮುನ್ನ ಊರಿನ ದೇವಾಲಯಗಳಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಅನಂತರ ಮನೆಗೆ ಬಂದಾಗ ಮನೆಯ ಮುಂದಿನ ಬಾಗಿಲಲ್ಲಿ ಸೇರಿನಲ್ಲಿ ಅಕ್ಕಿ ಇಟ್ಟಿರುತ್ತಾರೆ. ಅದನ್ನು ವದು ಉರುಳಿಸಿ ಮುಂದೆ ಹೋಗುತ್ತಾಳೆ. ಅನಂತರ ಅನೇಕ ಹಾಸ್ಯಪೂರ್ಣವಾದಂತಹ ಹಾಸ್ಯಗಳು ನಡೆಯುತ್ತದೆ. ಹೆಣ್ಣಿನ ಜೊತೆ ಅವಳ ಗೆಳತಿಯರನ್ನು ಕಳುಹಿಸಲಾಗುತ್ತದೆ. ಅವರನ್ನು 'ಅಡುಳ್ಳಿ'ಗಳು ಎಂದು ಕರೆಯುತ್ತಾರೆ. ಗಂಡಿನ ಮನೆಯಲ್ಲಿ ಅನೇಕ ಶಾಸ್ತ್ರಗಳನ್ನು ಮಾಡಿಸುತ್ತಾರೆ. ಮಾರನೆಯ ದಿನ ಹೆಣ್ಣಿನ ಕೈಯಿಂದ ಕೆಲವು ಕೆಲಸಗಳನ್ನು ಮಾಡಿಸುತ್ತಾರೆ. ತಿಂಡಿಯಾದ ಮೇಲೆ ಗಂಡು ಪಂಚೆಯನ್ನು ಉಟ್ಟು ಹೆಣ್ಣು ಮುಸುಕಿನ ಸೀರೆಯನ್ನು ತೊಟ್ಟಿರುತ್ತಾಳೆ. ಇಬ್ಬರನ್ನು ಎದುರು ಬದುರಾಗಿ ಕುಳ್ಳಿರಿಸಿ ಓಕುಳಿಯಾಟವಾಡಿಸುತ್ತಾರೆ. ಇದಾದ ಮೇಲೆ ಸ್ನಾನ ಮಾಡಿಸಿ ಮದುವೆ ಉಡುಗೆಗಳನ್ನು ಉಡಿಸಿ ಹಸೆಮಣೆ ಮೇಲೆ ಕೂರಿಸಿ ಶಾಸ್ತ್ರ ಮಾಡುತ್ತಾರೆ.

**ಬೀಗರು:** ಈ ಮೇಲಿನ ಶಾಸ್ತ್ರಗಳು ಮುಗಿಯುವ ಹೊತ್ತಿಗೆ ಹೆಣ್ಣಿನ ಕಡೆಯವರು ತಮ್ಮ ತಮ್ಮ ಸಂಬಂಧಿಕರನ್ನು ಕರೆದುಕೊಂಡು ಬರುತ್ತಾರೆ. ಅಂದು ಗಂಡಿನ ಮನೆಯಲ್ಲಿ ಭರ್ಜರಿ ಭೋಜನವಿರುತ್ತದೆ. ಇದಕ್ಕೆ ಹೆಚ್ಚಾಗಿ ಮಾಂಸದ ಅಡುಗೆಯನ್ನು ಮಾಡಿಸುತ್ತಾರೆ. ತಿನ್ನದವರಿಗೆ ಸಿಹಿ ಅಡುಗೆಯು ಇರುತ್ತದೆ. ಊಟ ಮುಗಿಸಿಕೊಂಡು ದಂಪತಿಗಳನ್ನು ಹೆಣ್ಣಿನ ಮನೆಗೆ ಕರೆದುಕೊಂಡು ಹೋಗುತ್ತಾರೆ. ಅನಂತರ ಶಾಸ್ತ್ರದ ಪ್ರಕಾರ ಕೆಲವರು ೩, ೫, ೯ ದಿನಕ್ಕೆ ಕಳುಹಿಸುತ್ತಾರೆ. ಹೀಗೆ ಹೆಣ್ಣು ಗಂಡಿನ ಕರೆಯುವ, ಕಳುಹಿಸುವ ಶಾಸ್ತ್ರ ನಡೆಯುತ್ತಲೇ ಇರುತ್ತದೆ. ಹತ್ತಿರದ ಸಂಬಂಧಿಕರನ್ನು ನವವಧುವರರನ್ನು ತಮ್ಮ ಮನಗೆ ಕರೆಸಿಕೊಂಡು ಉಪಚಾರ ಮಾಡಿ ಕಳುಹಿಸುತ್ತಾರೆ. ಹೆಣ್ಣಿನ ಮನೆಯಲ್ಲಿ ಹೊಸ ಅಳಿಯನಿಗೆ ದಿನವೂ ಬಗೆಬಗೆಯ ಉಟೋಪಚಾರಗಳು ನಡೆಯುತ್ತವೆ.

ತಿಂಗಳಿಗೆ ಮೂರುದಿನ ಇರುವಂತೆ ವಧುವರರಿಬ್ಬರೂ ಚಪ್ಪರಕ್ಕೆ ಪೂಜೆ ಮಾಡಿ ಆ ದಿನ ಕಂಬಗಳನ್ನು ಸಡಿಲಿಸಿ ಒಂದು ಗರಿಯನ್ನು ತೆಗೆಯುತ್ತಾರೆ. ಅನಂತರ ಬೇರೆಯವರು ಅದನ್ನು ತೆಗೆಯುತ್ತಾರೆ. ಅನಂತರ ಬರುವ ಹಳ್ಳಿಗಳಿಗೆಲ್ಲ ಅಳಿಯ

ಮಗಳನ್ನು ಕರೆಯಿಸಿಕೊಂಡು ಹಬ್ಬ ಆಚರಿಸುತ್ತಾರೆ. ಹೆಣ್ಣು ಗಂಡಿಗೆ ಸಂಪ್ರದಾಯದಂತೆ ಉಡುಗೆಗಳನ್ನು ಕೊಡುತ್ತಾರೆ. ಇದೇ ವೇಳೆಯಲ್ಲಿ ಒಂದು ಶುಭದಿನದಂದು ಪ್ರಸ್ತದ ಶಾಸ್ತ್ರವನ್ನು ನೆರವೇರಿಸಲಾಗುತ್ತದೆ.

ಹೀಗೆ ಕಬ್ಬತ್ತಿ ಗ್ರಾಮದಲ್ಲಿರುವ ಎಲ್ಲ ಜಾತಿಯವರಲ್ಲಿಯೂ ಮದುವೆ ಸಂದರ್ಭದಲ್ಲಿ ನಡೆಸುವಂತಹ ಸಾಮಾನ್ಯ ಶಾಸ್ತ್ರಗಳಾಗಿವೆ. ಎಲ್ಲೋ ಒಂದೆರಡು ಬೇರೆ ಬೇರೆಯಾಗಿರುತ್ತವೆ. ಇನ್ನು ಬ್ರಾಹ್ಮಣರಲ್ಲಿ ಸ್ವಲ್ಪ ಬಿನ್ನವಾಗಬಹುದು ವಿಧಿವಿಧಾನಗಳಲ್ಲಿ. ಇಂದಿನ ಮದುವೆಗಳಲ್ಲಿ ಈ ಮೇಲಿನ ಎಷ್ಟೋ ಆಚರಣೆಗಳು ಬಿಟ್ಟುಹೋಗಿವೆ ಎಂದು ಹೇಳಬಹುದು. ಅವರು ಕೆಲವು ಕಡೆ ಅವನ್ನೇ ಸರಳೀಕರಿಸಿಕೊಂಡು ಮಾಡುತ್ತಿರುವುದನ್ನು ನೋಡಬಹುದು.

## ಮರಣದಲ್ಲಿ

ಸಾವು ವ್ಯಕ್ತಿಯ ಮೇಲೆ ಅನಿರೀಕ್ಷಿತವಾಗಿ ದಾಳಿ ಮಾಡುತ್ತದೆ. ಮಾನವ ಮಾತ್ರವಲ್ಲ ಇತರ ಯಾವುದೇ ಜೀವಿ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. 'ಹುಟ್ಟು ಆಕಸ್ಮಿಕ, ಸಾವು ನಿಶ್ಚಿತ' ಎಂಬಂತೆ ಅದನ್ನು ತಡೆಯುವವವರು ಯಾರು ಇಲ್ಲ. ಇಂದು ವೈದ್ಯಕೀಯ ಸೌಲಭ್ಯದಿಂದ ಸಾವನ್ನು ಸ್ವಲ್ಪ ದಿನಗಳವರೆಗೆ ಮುಂದೂಡಬಹುದೇ ಹೊರತು ತಪ್ಪಿಸಲು ಅವರಿಂದಲೂ ಸಾಧ್ಯವಿಲ್ಲ. ಸಾವು ಯಾವಾಗ ಸಂಭವಿಸುತ್ತದೆ ಎಮದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಹೀಗೆ ಸತ್ತ ವ್ಯಕ್ತಿಗೆ ನಡೆಸುವ ಸಂಸ್ಕಾರಗಳು ವಿವಿಧ ವಯೋಧರ್ಮಕ್ಕನುಗುಣವಾಗಿ ನಡೆಯುತ್ತದೆ.

ಮಗುವೊಂದು ಸತ್ತರೆ ಈ ಊರಿನಲ್ಲಿ ಆ ಮಗುವನ್ನು ಅವರ ಕುಟುಂಬದವರೇ ಹೂಳುತ್ತಾರೆ. ಅದಕ್ಕೆ ಹೆಚ್ಚಾಗಿ ಆಚರಣೆ ಇರುವುದಿಲ್ಲ. ಆಗತಾನೆ ಹುಟ್ಟಿದ ಮಗು ಸತ್ತರೆ ಆ ಮಗುವನ್ನು ಹುತ್ತಕ್ಕೆ ಊಳುತ್ತಾರೆ.

ವಯಸ್ಸಾದ ವೃದ್ಧರದ್ದು ಸಾಮಾನ್ಯವಾಗಿ ಇನ್ನೇನು ಜೀವ ಹೋಗುವುದು ಎಂದು ಖಚಿತವಾದಾಗ ಎಲ್ಲರೂ ಬಾಯಿಗೆ ನೀರು/ಹಾಲು ಬಿಡುತ್ತಾರೆ. ಮನೆಯ ಒಳಭಾಗದಲ್ಲೆ ಪ್ರಾಣಬಿಟ್ಟರೆ ಶವವನ್ನು ಮನೆಯ ಹೊರಭಾಗದಲ್ಲಿ ತಂದು ಮಲಗಿಸುವುದು ಪದ್ಧತಿ. ಶವದ ಕೈಕಾಲುಗಳನ್ನು ಮಡಿಸಿ ಬಿಳಿ ಬಟ್ಟೆಯನ್ನು ಹೊದಿಸುತ್ತಾರೆ. ಹಣೆಗೆ ನಾಣ್ಯವನ್ನು ಮೂಗಿಗಿ ಹತ್ತಿಯನ್ನು ಹಾಕಿ ತಲೆಯಪಕ್ಕ ಒಂದು ದೀಪ ಇಟ್ಟು ದೀಪವನ್ನಿಡಲಾಗುತ್ತದೆ. ಸಂಬಂಧಪಟ್ಟವರಿಗೆಲ್ಲಾ ತಿಳಿಸುತ್ತಾರೆ. ಎದೆಯ ಮೇಲೆ ಬೆಲ್ಲ, ಕುಡ್ಲು, ಅಕ್ಕಿಯನ್ನು ತಟ್ಟೆಯೊಳಕ್ಕೆ ಹಾಕಿ ಇಡುತ್ತಾರೆ. ಸತ್ತ ಶವದ ಮುಂದೆ ಒಬ್ಬರಾದ ಮೇಲೆ ಒಬ್ಬರಂತೆ ಗೋಳಾಡುತ್ತಾರೆ. ಆ ವ್ಯಕ್ತಿಯ ಗುಣಗಾನ ಮಾಡುತ್ತಾರೆ. ಹೆಣದ ಚಟ್ಟ ಕಟ್ಟುವುದು ಇತ್ಯಾದಿ ಕಾರ್ಯವನ್ನು ಅನುಭವಿಕರು

ಮಾಡಿಸುತ್ತಿರುತ್ತಾರೆ. ಶವಕ್ಕೆ ಹೂಗಳಿಂದ ಸಿಂಗರಿಸುತ್ತಾರೆ. ಬಂಧುಬಾಂಧವರೆಲ್ಲ ಶವಕ್ಕೆ ಪೂಜೆ ಮಾಡಿ ಧೂಪ ಹಕಿ ನಮಸ್ಕರಿಸುತ್ತಾರೆ. ಮೃತನ ಆತ್ಮಕ್ಕೆ ಶಾಂತಿ ಕೋರಲೆಂದು ವಾದ್ಯ ಓಲಗಗಳನ್ನು ಕರೆಸಿರುತ್ತಾರೆ. ಪೂಜೆ ಎಲ್ಲ ಆದಮೇಲೆ ಮತ್ತೆ ಶವಕ್ಕೆ ಸ್ನಾನ ಮಾಡಿಸುತ್ತಾರೆ. ಆಗ ಮತ್ತೊಮ್ಮೆ ಪೂಜೆ ಮಾಡಿ ಚಟ್ಟದ ಮೆಲೆ ಮಲಗಿಸಿ ಶವದ ಯಾತ್ರೆ ಪ್ರಾರಂಭಿಸುತ್ತಾರೆ. ಮೊದಲು ವಾದ್ಯದವರು ಹೋಗುತ್ತಾರೆ. ಅವರ ಹಿಂದೆ ಕೂಳಿನ ಮಡಕೆ ಹಿಡಿದವನು ಅವರ ಹಿಂದೆ ಶವ ಹೊತ್ತವರು ಅವರ ಹಿಂದೆ ಸಂಬಂಧಿಕರು ಹೊರಡುತ್ತಾರೆ. ಊರಾಚೆಗೆ ಹೋಗಿ ಮುರು ದಾರಿ ಕೂಡಿದ ಜಾಗದಲ್ಲಿ ಶವ ಇಳಿಸುತ್ತಾರೆ. ಮತ್ತೆ ಹೆಣವನ್ನು ಎತ್ತುಕೊಂಡು ಹೋಗಿ ಗುಂಡಿ ತೋಡಿರುವ ಜಾಗಕ್ಕೆ ಹಿಂತಿರುಗಿ ನೋಡದಂತೆ ತೆಗೆದುಕೊಂಡು ಹೊಗುತ್ತಾರೆ. ಗುಂಡಿಯನ್ನು ಮೂರು ಅಡಿಅಗಲ, ಆರು ಅಡಿ ಉದ್ದ ಜಾಗದಲ್ಲಿ ಆರು ಅಡ ಆಳದಷ್ಟು ಗುಂಡಿ ತೋಡುತ್ತಾರೆ. ಗುಂಡಿಯ ತಳಭಾಗದಲ್ಲಿ ದಕ್ಷಿಣ ದಿಕ್ಕಿಗೆ ತಲೆಹಿಡಿಸುವಷ್ಟು ಅಗಲವಾದ ಒಂದು ಗೂಡನ್ನು ಕೊರೆಯಿಸಿರುತ್ತಾರೆ. ಅನಂತರ ಗುಂಡಿಯಲ್ಲಿ ನಿಂತವರು ಹೆಣವನ್ನು ಎಚ್ಚರಿಕೆಯಿಂದ ಎತ್ತಿ ಗುಂಡಿಯಲ್ಲಿ ಮಲಗಿಸುತ್ತಾರೆ. ಗಂಡಸು ಸತ್ತಿದ್ದರೆ ಆತನ ಹೆಂಡತಿಗೆ ಆಕೆಯ ತೌರಿನವರು ಶವ ತರುವ ಮುನ್ನ ಹೊಸ ಸೀರೆ ಉಡಿಸಿ ಪೂರ್ಣ ಮುತ್ತೈದೆ ಅಲಂಕಾರ ಮಾಡಿರುತ್ತಾರೆ. ಆ ದೃಶ್ಯವನ್ನು ನೋಡಲು ಸಾಧ್ಯವಾಗದ ರೀತಿ ಇರುತ್ತದೆ. ಅನಂತರ ಶವದ ಮೇಲೆ ಬಿಳಿ ವಸ್ತ್ರವನ್ನು ಮುಚ್ಚಿ ಎಲ್ಲರೂ ನೋಡಿದ ಮೇಲೆ ಎಲ್ಲರೂ ಒಂದೊಂದು ಹಿಡಿ ಮಣ್ಣನ್ನು ಹಾಕುತ್ತಾರೆ. ಅನಂತರ ಮಣ್ಣು ತುಂಬುತ್ತಾರೆ. ಅವರ ಮೇಲೆ ಮತ್ತೆ ಪೂಜೆ ಮಾಡುತ್ತಾರೆ. ಅದರ ಮೇಲೆ ಒಂದು ತುಳಸಿ ಗಿಡ, ತೆಂಗಿನ ಹೊಂಬಾಳೆ, ಬಾಳೆ ಕಂದನ್ನು ನೆಡುತ್ತಾರೆ.

ಅಪಘಾತದಲ್ಲಿ, ಆಕಸ್ಮಿಕವಾಗಿ, ಅವಿವಾಹಿತರಾಗಿ ಸತ್ತವರು, ಆತ್ಮಹತ್ಯೆ ಮಾಡಿಕೊಂಡವರನ್ನು ಯಾವುದಾದರೂ ಕ್ಷಯದಂತಹ ರೋಗದಿಂದ ಸತ್ತವರನ್ನು ಹೂಳದೆ ಸುಡುತ್ತಾರೆ. ಮದುವೆಯಾಗದೆ ಸತ್ತವರನ್ನು ಅವರ ಅಣ್ಣ, ತಮ್ಮ, ಅಕ್ಕ, ತಂಗಿಯ ಮದುವೆಯಾಗುವಾಗ 'ಹಿರಿಯರ ಮದುವೆ' ಎಂದು ಹೇಳಿ ಚಿಕ್ಕ ಮಕ್ಕಳ ಮದುವೆ ಮಾಡಿಸುತ್ತಾರೆ. ಆಗ ಸತ್ತವರ ಮದುವೆಯಾಯಿತು ಎಂದು ತಿಳಿಯುತ್ತಾರೆ.

ಶವಸಂಸ್ಕಾರ ಮಾಡಿದವರು ಅಂದರೆ ತಂದೆ ಸತ್ತರೆ ಹಿರಿಯ ಮಗ, ತಾಯಿ ಸತ್ತರೆ ಕಿರಿಯ ಮಗ ತಲೆ ಬೋಳಿಸಿಕೊಂಡು ಅವರೇ ಸಂಸ್ಕಾರ ಮಾಡಬೇಕು. ಹಾಗೆ ಮಾಡಿದವರು ತಲೆಯಮೇಲೆ ಮಡಕೆ ಹೊತ್ತು ಸಮಾಧಿಯನ್ನು ಮೂರು ಸುತ್ತು ಬರುತ್ತಾನೆ. ಆಗ ಕುಡುಗೋಲಿನಿಂದ ಮಡಿಕೆಯನ್ನು ತೂತುಮಾಡುತ್ತಾರೆ. ಹೀಗೆ ಮೂರು ತೂತು ಮಾಡಿದ ಮೆಲೆ ಆಗ ಜಾಗದಲ್ಲಿ ನಿಂತುಕೊಂಡೇ ಹೆಗಲ ಮೆಲಿಂದ

ಹಿಂದಕ್ಕೆ ಗಡಿಗೆಯನ್ನು ಕೆಳಕ್ಕೆ ಬಿಡುತ್ತಾನೆ. ಹಾಕಿದ ಮೇಲೆ ಹಿಂತಿರುಗಿ ನೋಡಬಾರದೆಂದು ಹೇಳುತ್ತಾರೆ. ಕೊನೆಗೆ ಅಲ್ಲಿ ಸೇರಿದವರೆಲ್ಲ ಬರುವಾಗ ನೀರು ಮುಟ್ಟುತ್ತಾರೆ. ಮನೆಗೆ ಬಂದನಂತರ ಬಮದವರು ಮೊದಲು ದೀಪ ನೋಡಬೆಕೆಂದು ದೀಪ ಇಡುತ್ತಾರೆ.

**ತಿಥಿ:** ವ್ಯಕ್ತಿ ಸತ್ತ ಹನ್ನೊಂದು ದಿನಕ್ಕೆ ತಿಥಿ ಮಾಡುತ್ತಾರೆ ಸತ್ತ ಮೂರನೇ ದಿನಕ್ಕೆ ಹಾಲುತುಪ್ಪ ಬಿಡುತ್ತಾರೆ. ಕೆಲವರು ಸತ್ತ ದಿನವೇ ಹಾಲುತುಪ್ಪವನ್ನು ಗುದ್ದಿನ ಹತ್ತಿರ ಬಿಡುತ್ತಾರೆ. ಹನ್ನೊಂದನೆ ದಿನದ ತಿಥಿಯಂದು ಬಂದು ಬಳಗದವರೆಲ್ಲ ಸೇರಿರುತ್ತಾರೆ. ಸತ್ತವರ ಆತ್ಮಕ್ಕೆ ತೃಪ್ತಿ ದೊರಕಿಸುವ ದಿನ ಇದನ್ನು ಹಗಲು ವೇಳೆ ಮಾಡುತ್ತಾರೆ. ಮನೆಗೆಲ್ಲಾ ಸುಣ್ಣಬಣ್ಣವನ್ನು ಹಚ್ಚಿರುತ್ತಾರೆ. ಮನೆಯನ್ನು ಹಬ್ಬದಂತೆ ಮಾಡುತ್ತಾರೆ. ಅಂದು ಎಲ್ಲರೂ ಸ್ನಾನಮಾಡಿ ಮಡಿಯಾಗಿರುತ್ತಾರೆ. ಅಂದು ಸತ್ತವರಿಗೆ ಇಷ್ಟವಾದಂತಹ ತಿಂಡಿ–ತಿನಿಸು–ವಸ್ತುಗಳು ಎಲ್ಲವನ್ನು ಮಾಡಿ ಎಡೆ ಇಡುತ್ತಾರೆ. ಅಂದು ಅಲ್ಲಿ ಬಂದವರಿಗೂ, ಊರಿನವರಿಗೆಲ್ಲರಿಗೂ ಸಿಹಿಅಡಿಗೆ ಮಾಡಿರುತ್ತಾರೆ. ಇದಕ್ಕೂ ಮೊದಲು ಎಲ್ಲರೂ ಸಮಾಧಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಅಲ್ಲಿ ಕೂಳು ಹಾಕುವುದೆಂದು ಕಾಗೆಗೆ ಎಡೆಯನ್ನು ಕೊಡುತ್ತಾರೆ. ಕಾಗೆ ಬಂದು ತಿಂದರೆ ಸತ್ತವರಿಗೆ ಸ್ವರ್ಗ ಸಿಗುತ್ತದೆಂಬ ನಂಬಿಕೆ ಅಲ್ಲಿ ಪೂಜೆಯೆಲ್ಲವನ್ನು ಮಾಡಿ ಪ್ರಾರ್ಥಿಸಿಕೊಂಡು ಬರುತ್ತಾರೆ. ಅಂದಿನ ಕಾರ್ಯಾಚರಣೆಯ ಸಲುವಾಗಿಯೇ ವಿಶೇಷವಾಗಿ ಸಿಹಿ ಊಟವನ್ನು ಅಣಿಗೊಳಿಸಲಾಗುತ್ತದೆ. ಪ್ರಸಾದ ಸ್ವೀಕಾರದ ಅನಂತರ ಎಲ್ಲರೂ ಕುಳಿತು ಸಹಭೋಜನ ನಡೆಸುತ್ತಾರೆ. ಅನಂತರ ಅಂದು ಒಂದುದಿನ ಉಳಿದಿದ್ದು ಮಾರನೆಯ ದಿನ ಮಾಂಸದೂಟವನ್ನು ಮಾಡಿಕೊಂಡು ಅವರವರ ಮನೆಗೆ ತೆರಳುತ್ತಾರೆ. ಉತ್ತರ ಕ್ರಿಯೆಗಳೆಲ್ಲ ಮುಗಿದ ಬಳಿಕ ಅಸಹಜವಾಗಿ ಮರಣ ಹೊಂದಿದವರನ್ನು ಸುಟ್ಟಂತಹ ಬೂದಿಯನ್ನು ಪವಿತ್ರ ಯಾತ್ರಾಗಳಿಗೆ ಒಯ್ದು ತೇಲಿ ಬಿಡಲಾಗುತ್ತದೆ. ಅಲ್ಲಿಗೆ ಎಲ್ಲಾ ಸಂಸ್ಕಾರಗಳು ಮುಗಿದಂತೆಯೇ.

ಒಟ್ಟಾರೆ ಗಮನಿಸಿದಾಗ ಸತ್ತ ವ್ಯಕ್ತಿ ಭೂತವಾಗಿ ತಮ್ಮನ್ನು ಕಾಡಿಯಾನು ಎಂಬ ಭಯ. ಅದರಿಂದ ತಪ್ಪಿಸಿಕೊಳ್ಳುವ ಮುಂಜಾಗ್ರಾ ಕ್ರಮವಾಗಿ ಈ ಶವಸಂಸ್ಕಾರದ ನಂಬಿಕೆ, ಆಚರಣೆಗಳು ಕಂಡು ಬರುತ್ತವೆ. ಕುಟುಂಬಕದಕೆ ಯಾವ ಬಾಧಕವೂ ತಟ್ಟದಂತೆ ಇರಲಿ ಎಂಬ ಅಭಿಲಾಷೆಯು ಇರುತ್ತದೆ. ಸತ್ತವರ ಹೆಸರಿನಲ್ಲಿ ವರ್ಷಕ್ಕೊಮ್ಮೆ ಎಡೆಹಾಕುತ್ತಾರೆ. ವಿಶೇಷವಾಗಿ ಆ ಹಬ್ಬವನ್ನು 'ಪಿತೃಪಕ್ಷ' ಎಂದು ಕರೆಯುತ್ತಾರೆ. ಇಷ್ಟವಾದ ಎಲ್ಲಾ ವಸ್ತುಗಳನ್ನು ತಿಂಡಿ ತಿನಿಸುಗಳನ್ನು ಇಟ್ಟು ಹಣ್ಣುಗಳನ್ನು ಪೂಜಿಸುತ್ತಾರೆ. ಹೀಗೆ ಕಬ್ಬತ್ತಿ ಗ್ರಾಮದಲ್ಲಿ ಸಾಮಾಜಿಕ ಸಂಪ್ರದಾಯಗಳು

ವಿವಿಧ ಜಾತಿಯರಲ್ಲಿಯೂ ಭಿನ್ನವಾಗಿ ಕೆಲವು ಸಾಮಾನ್ಯವಾಗಿ ಇರುವುದನ್ನು ಕಾಣಬಹುದು.

**ಆಹಾರ ಪದ್ಧತಿ:**

ಯಾವುದೇ ಒಂದು ಪ್ರದೇಶದ ಜನರ ಆಹಾರ ಪದ್ಧತಿಯನ್ನು ಅಭ್ಯಸಿಸುವಾಗ ಅವರನ್ನು ಸಸ್ಯಾಹಾರಿ, ಮಾಂಸಾಹಾರಿಗಳೆಂಬ ಆಧಾರದ ಮೇಲೆ ವರ್ಗೀಕರಣ ಮಾಡಲಾಗುತ್ತದೆ. ಆದರೆ ಇಂದು ಈ ವರ್ಗೀಕರಣದ ಅವಶ್ಯಕತೆ ಇಲ್ಲವೆಂದು ತೋರುತ್ತದೆ. ಏಕೆಂದರೆ ಸಾಮಾನ್ಯವಾಗಿ ಇಂದು ಹೆಚ್ಚಿನ ಜಾತಿಗಳವರು ಮಾಂಸಾಹಾರವನ್ನು ಸೇವಿಸುತ್ತಾರೆ. ಸೇವಿಸದವರು ಕೆಲವರು ಮಾತ್ರ ಕಬ್ಬತ್ತಿಯಲ್ಲಿ ಮುಖ್ಯ ಆಹಾರವಾಗಿ ಅಂದರೆ ದಿನನಿತ್ಯದ ಆಹಾರಕ್ಕೆಂದು ಹೆಚ್ಚಾಗಿ ಭತ್ತ, ರಾಗಿ, ಜೋಳ, ಗೋಧಿ ಬಳಸುತ್ತಾರೆ. ಇನ್ನೂ ಹಬ್ಬಗಳನ್ನು ಜಾತ್ರೆಯ ಸಂದರ್ಭದಲ್ಲಿ ನೆಂಟರಿಷ್ಟರು ಮನೆಗೆ ಬಂದಾಗ ವಿಶೇಷವಾದಂತಹ ತಿಂಡಿಗಳನ್ನು ಮಾಡುತ್ತಾರೆ. ಅಂದರೆ ಹೋಳಿಗೆ, ಕಜ್ಜಾಯ, ಪಾಯಸ, ಚಕ್ಕುಲಿ, ಕೋಡುಬಳೆ, ಕರ್ಜಿಕಾಯಿ, ತಂಬಿಟ್ಟು ಮುಂತಾದ ತಿಂಡಿಗಳ ಜೊತೆಗೆ ಇತ್ತೀಚೆಗೆ ಕಾಣಿಸಿಕೊಂಡಿರುವ ಜಾಮೂನು, ಮೈಸೂರುಪಾಕ್, ಚಿರೋಟಿ, ಜಿಲೇಬಿ ಮುಂತಾದ ಸಿಹಿ ತಿಂಡಿಗಳನ್ನು ಮಾಡುತ್ತಾರೆ. ಇನ್ನುಳಿದಂತೆ ಸಾಮಾನ್ಯವಾಗಿ ಎಲ್ಲ ಜಾತಿಯವರು ದಿನನಿತ್ಯದಲ್ಲಿ ಅನ್ನ, ಸಾರು, ಪಲ್ಯ, ರಾಗಿಮುದ್ದೆ, ಮಜ್ಜಿಗೆ, ಮೊಸರು, ಹಪ್ಪಳ, ಉಪ್ಪಿನಕಾಯಿ, ಸಂಡಿಗೆಯನ್ನು ಊಟವಾಗಿ ದಿನನಿತ್ಯದಲ್ಲಿ ಬಳಸುತ್ತಾರೆ. ಚಿತ್ರಾನ್ನ, ರೊಟ್ಟಿ, ದೋಸೆ, ಇಡ್ಲಿ ಮೊದಲಾದ ಆಹಾರವನ್ನು ಬೆಳಗಿನ ತಿಂಡಿಯಾಗಿ ಬಳಸುತ್ತಾರೆ. ಜತೆಗೆ ಕಾಫಿ, ಟೀಗಳನ್ನು ತೆಗೆದುಕೊಳ್ಳುತ್ತಾರೆ.

ಬ್ರಾಹ್ಮಣರನ್ನು ಬಿಟ್ಟು ಉಳಿದ ಜನಾಂದವರು ಮಾಂಸಾಹಾರ ಪ್ರಿಯರು. ಮಾಂಸಾಹಾರದ ಉಟವನ್ನು 'ಖಾರದ ಊಟ' ವಿಶೇಷ ಊಟ ಎಂತಲೂ ಕರೆಯುತ್ತಾರೆ. ಹಬ್ಬಹರಿದಿನದ ಮಾರನೆಯ ದಿನ, ಆಪ್ತರು- ನೆಂಟರು ಬಂದ ಸಂದರ್ಭ, ತಮಗೆ ಬೇಕೆಂದ ಸಂದರ್ಭದಲ್ಲಿ ಖಾರದ ಊಟವನ್ನು ಮಾಡುತ್ತಾರೆ. ಒಕ್ಕಲಿಗರಾದಿಯಾಗಿ ಬೇರೆ ಜನಾಂಗದವರು ಕುರಿ, ಮೆಕೆ, ಕೋಳಿ, ಮೀನು, ಹಂದಿ ಇತ್ಯಾದಿಗಳ ಮಾಂಸವನ್ನು ಸೇವಿಸುತ್ತಾರೆ. ಮನೆಯ ಒಂದು ಮೂಲೆಯಲ್ಲಿ ಕೃತಕ ಒಲೆಯೊಂದನ್ನು ನಿರ್ಮಿಸಿ ಈ ಅಡುಗೆಯನ್ನು ಮಾಡುತ್ತಾರೆ. ಹಂದಿ ಮಾಂಸವನ್ನು ಸೇವಿಸಿದ ಮೇಲೆ ಸ್ನಾನ ಮಾಡಿಕೊಳ್ಳುತ್ತಾರೆ. ಬಂದ ನೆಂಟರಿಷ್ಟರನ್ನು ಗರಿಷ್ಟಮಟ್ಟದಲ್ಲಿ ಸತ್ಕರಿಸುವುದೆಂದರೆ ಅವರಿಗೆ ಮಾಂಸಾಹಾರ ಊಟವನ್ನು ಏರ್ಪಡಿಸುವುದು ಎಂಬುದು ಇವರ ನಂಬಿಕೆಯಾಗಿದೆ. ಸೋಮವಾರ, ಶನಿವಾರ ಬಹುಪಾಲು ಮನೆಗಳಲ್ಲಿ ಮಾಂಸಾಹಾರ ಸೇವನೆ ಇರುವುದಿಲ್ಲ.

## ಮೂರು ಉಡುಗೆ ಮತ್ತು ತೊಡುಗೆಗಳು

**ಉಡುಗೆಗಳು:** ಮನುಷ್ಯನ ಬದುಕಿನಲ್ಲಿ ಮೊದ-ಮೊದಲಲ್ಲಿ ಕೇವಲ ಪ್ರಾಕೃತಿಕ ಅವಶ್ಯಕತೆ ಆಗಿದ್ದ ಉಡುಪು ಬರುಬರುತ್ತಾ ಸಾಮಾಜಿಕ ಬಂಧನವಾಗಿ ಮಾರ್ಪಟ್ಟಿದ್ದು ಕುತೂಹಲಕಾರಿಯಾದ ಸಂಗತಿಯಾಗಿದೆ. ಇಂದು ಅವನ ವೃತ್ತಿ, ಯೊಗ್ಯತೆ ಸಾಮಾಜಿಕ ಅಂತಸ್ತನ್ನು ನಿರ್ಧರಿಸುವ ಮಟ್ಟಕ್ಕೆ ಬೆಳೆದು ಬಂದಾಗಿನಿಂದ ಮನುಷ್ಯನ ಬದುಕಿನ ಅವಿಭಾಜ್ಯ ಅಂಶವಾಗಿ ಬಿಟ್ಟಿದೆ. ಕಾಲ ಉರುಳಿದಂತೆ ಅವುಗಳಲ್ಲಿ ವ್ಯತ್ಯಾಸವಾಗಿ ಜೊತೆಗೆ ಪಾಶ್ಚಾತ್ಯರ ಪ್ರಭಾವವಾಗಿ ಈಗ ಅವರಂತೆಯೇ ಉಡುಗೆಗಳನ್ನು ಉಡುವ ರೀತಿಯನ್ನು ನೋಡಬಹುದು.

ಕಬ್ಬತ್ತಿ ಗ್ರಾಮದಲ್ಲಿ ವಿವಿಧ ವೃತ್ತಿ ಕಸುಬನ್ನಾಧರಿಸಿದ ಜನಾಂಗಗಳಿರುವುದರಿಂದ ಅವರು ಧರಿಸುವ ಉಡುಪುಗಳು ವೈವಿಧ್ಯಮಯವಾಗಿವೆ. ಈ ಉಡುಪುಗಳನ್ನು ಸ್ಥೂಲವಾಗಿ ಗಂಡಸರ, ಹೆಂಗಸರ, ಮಕ್ಕಳ ಉಡುಪುಗಳೆಂದು ವರ್ಗೀಕರಿಸಬಹುದು.

**ಗಂಡಸರ ಉಡುಪುಗಳು:** ಸಾಮಾನ್ಯವಾಗಿ ಗಂಡಸರು ಅರ್ಧ ತೋಳು, ತುಂಬು-ತೋಳಿನ ಅಂಗಿ, ಮಂಡಿ ಮೇಲಿನವರೆಗೆ ಚಡ್ಡಿ, ಬಿಳಿ ಪಂಚೆ, ಬಣ್ಣದ ಲುಂಗಿ ಈ ವೇಷದಲ್ಲಿರುತ್ತಾರೆ. ಹೊಲಗದ್ದೆಗಳಲ್ಲಿ ದುಡಿಯುವ ಗಂಡಸರು ಬನಿಯನ್-ನಿಕ್ಕರ್ ಧರಿಸಿದ್ದರೆ, ವ್ಯಾಪಾರಸ್ಥರು ತುಂಬು ತೋಳಿನ ಅಂಗಿ, ಪಂಚೆ, ಲುಂಗಿ ಅಥವಾ ಪ್ಯಾಂಟ್ ಧರಿಸುತ್ತಾರೆ. ಪ್ರೌಢಶಾಲೆಯ ಮಕ್ಕಳಿಂದ ಕಾಲೇಜಿಗೆ ಹೋಗುವ ಮಕ್ಕಳು ಅಂಗಿ ಮತ್ತು ಪ್ಯಾಂಟ್ ಧರಿಸುತ್ತಾರೆ. ದೇವಸ್ಥಾನದ ಅರ್ಚಕರು ಪುರೋಹಿತ ವರ್ಗದವರು ಬಿಳಿಕಚ್ಚೆ, ಪಂಚೆಹಾಕಿ ಮೈಮೇಲೆ ಬಿಳಿಯ ಅಡ್ಡ ವಸ್ತ್ರವೊಂದನ್ನು ಹೊದ್ದಿರುತ್ತಾರೆ.

**ಹೆಂಗಸರ ಉಡುಪುಗಳು:** ಬ್ರಾಹ್ಮಣ ಸ್ತ್ರೀಯರನ್ನು ಹೊರತುಪಡಿಸಿ ಇನ್ನುಳಿದ ಬಹುಪಾಲು ಹೆಂಗಸರೆಲ್ಲಾ ಒಂದೇ ಮಾದರಿಯಲ್ಲಿ ಹತ್ತಿ ಸೀರೆ, ನೈಲೆಕ್ಸ್, ವಾಯಿಲ್ ಇತ್ಯಾದಿ ಸೀರೆಗಳನ್ನು ಉಡುತ್ತಾರೆ. ಸೀರೆ ನೆರಿಗೆ ಹಿಡಿಯುವುದು, ಸೊಂಟಕ್ಕೆ ಗಂಟುಹಾಕುವುದು ಮತ್ತು ಸೆರಗು ಮೂರು ಮುಖ್ಯಭಾಗಗಳು. ಆರ್ಥಿಕ ಸ್ಥಿತಿ ಸಾಧಾರಣವಿರುವವರು ನೂಲಿನ ಸೀರೆಗಳನ್ನು ಹೆಚ್ಚು ಬಳಸುತ್ತಾರೆ. ಬೆಲೆಬಾಳುವ ರೇಷ್ಮೆ ಸೀರೆ ಇತ್ಯಾದಿಗಳಿದ್ದರೆ ಮದುವೆ, ಮುಂಜಿ, ಹಬ್ಬ, ಪ್ರಯಾಣ ಇತ್ಯಾದಿ ಸಂದರ್ಭಗಳಲ್ಲಿ ಬಳಸುತ್ತಾರೆ. ಈಗ ಬಹುಪಾಲು ಎಲ್ಲರ ಮನೆಗಳಲ್ಲಿ ಚೂಡಿದಾರ್ ಮತ್ತು ನೈಟಿಗಳು ಪ್ರಭಾವಶಾಲಿಯಾಗಿವೆ. ಹೈಸ್ಕೂಲ್, ಕಾಲೇಜು, ಕಛೇರಿಗಳಿಗೆ ಹೋಗುವ ಹೆಣ್ಣು ಮಕ್ಕಳು ಹೆಚ್ಚು ಚೂಡಿದಾರವನ್ನು ಧರಿಸಿದರೆ ಮನೆಯಲ್ಲಿನ ಹೆಣ್ಣು ಮಕ್ಕಳು ನೈಟಿ ಎಂಬ ವಸ್ತ್ರವನ್ನು ಧರಿಸುತ್ತಾರೆ. ಇದನ್ನು ರಾತ್ರಿ ಮನೆಯೊಳಗೆ ಮಾತ್ರವಲ್ಲದೆ ಹಗಲೆಲ್ಲಾ ಮನೆಯ ಹೊರಗೂ ಹಾಕಿಕೊಂಡು ಓಡಾಡುತ್ತಾರೆ.

**ಮಕ್ಕಳ ಉಡುಪುಗಳು:** ಗಂಡು ಮಕ್ಕಳಿಗೆ ಅರ್ಧ ತೋಳಿನ ಅಂಗಿ, ನಿಕ್ಕರು ಮೋಜಿಗಾಗಿ ಕೋಟು, ಜುಬ್ಬ, ಹಾಕಿ ಅನಂದಿಸುತ್ತಾರೆ. ಹೆಣ್ಣು ಮಕ್ಕಳಿಗೆ ರವಿಕೆ, ಫ್ರಾಕು ಮುಖ್ಯವಾಗಿ ಉಡುಗೆಗಳಾಗಿವೆ.

**ತೊಡುಗೆಗಳು:** ಚೆನ್ನಾಗಿ ಉಡುಪು ಧರಿಸಿದ ಮೇಲೆ ಮನುಷ್ಯನಿಗೆ ತೊಡುಗೆಗಳ ಕಡೆ ಗಮನ ಹರಿದಿರಬೇಕು. ಬೆಲೆಬಾಳುವ ಮರದ, ಲೋಹದ, ಶಿಲೆಯ ಆಭರಣಗಳನ್ನು ಧರಿಸಿ ಆನಂದಿಸತೊಡಗಿದೆ. ಮುಂದೆ ಆಭರಣಗಳು ಶ್ರೀಮಂತಿಕೆಯ ಪ್ರತೀತವಾಯಿತು. ವೈವಿಧ್ಯಮಯ ವಾದ ಆಭರಣ ಅವರ ದೇಹದ ಆಭರಣ ಅವರ ದೇಹದ ಮೇಲೆ ರಾರಾಜಿಸತೊಡಗಿದವು. ಪುರಾತನಕಾಲದಿಂದ ಇಂದಿನವರೆಗೆ ಆಭರಣಗಳ ವ್ಯಾಮೋಹ ಸಾರ್ವತ್ರಿಕವಾಗಿದೆ.

ಗಂಡಸರು ತುಂಬಾ ವೈವಿಧ್ಯಮಯವಾದ ತೊಡುಗೆಗಳನ್ನು ಧರಿಸುತ್ತಾರೆ. ಇವುಗಳೆಂದರೆ ಪಂಚಪ್ರಾಣವಿದ್ದಂತೆ. ಇವು ಜಾತಿಭೇದವಿಲ್ಲದೆ ಆರ್ಥಿಕವಾಗಿ ಶ್ರೀಮಂತವಾಗಿರುವವರ ಹತ್ತಿರ ಹೆಚ್ಚಿನ ಸಂಖ್ಯೆಯಲ್ಲಿವೆ. ಚಿನ್ನದ ಮೂಗುತಿ, ವೈವಿಧ್ಯಮಯವಾದ ಓಲೆ, ಒಂದೆಳೆಸರ, ಎರಡಳೆಸರ, ಮೂರೆಳೆಸರ, ನಕ್ಲೆಸ್, ಬಳೆಗಳು, ಲೋಲಾಕು, ಜುಮುಕಿ, ತಾಳಿ ಮತ್ತು ಕಾಲುಂಗುರಗಳನ್ನು ಹೆಂಗಸರು ಧರಿಸುತ್ತಾರೆ. ಇಲ್ಲಿ ಬಳೆಗಳು ಕೆಲವು ಸಂದರ್ಭದಲ್ಲಿ ಗಾಜಿನದಾಗಿರುತ್ತದೆ. ಹಾಗೆಯೇ ಕಾಲುಂಗುರ ಬೆಳ್ಳಿಯದ್ದಾಗಿರುತ್ತದೆ. ಇನ್ನು ಮಿಕ್ಕೆಲ್ಲವು ಚಿನ್ನದವೇ ಆಗಿರುತ್ತವೆ. ಪ್ರತಿಯೊಬ್ಬ ಹೆಣ್ಣು ಮಕ್ಕಳು ಕನಿಷ್ಠ ಮೂಗುತಿ, ಓಲೆ, ತಾಳಿ, ಕಾಲುಂಗುರವನ್ನು ಹೊಂದಿಯೇ ಇರುತ್ತಾರೆ.

ಚಿಕ್ಕಮಕ್ಕಳಿಗೆ ಕಿವಿ ಚುಚ್ಚಿ ಕಿವಿಯ ಆಭರಣ ತೊಡಿಸುತ್ತಾರೆ. ಅಲ್ಲದೆ ಬೇರುಗಳಿಗೆ ಉಂಗುರ ಮತ್ತು ನಡುವಿಗೆ ಬೆಳ್ಳಿಯ ಉಡುದಾರ ಹಾಕುತ್ತಾರೆ. ಹೆಣ್ಣುಮಕ್ಕಳಿಗೆ ಮೂಗು ಚುಚ್ಚುವುದು ಕಡ್ಡಾಯ. ಅಲ್ಲದೆ ಬೆರಳುಗಳಿಗೆ ಉಂಗುರ, ಕಾಲುಚೈನು, ಕೊರಳಿಗೆ ಚೈನು, ತಲೆಗೆ ಬೈತಲೆಮಣಿ ಇತ್ಯಾದಿಗಳನ್ನು ತೊಡಿಸುತ್ತಾರೆ.

ಇವುಗಳ ಜತೆಗೆ ಹೆಂಗಸರು ಹಣೆಗೆ ಕುಂಕುಮ, ಕೆನ್ನೆಗೆ ಹರಿಸಿನ ಹಚ್ಚಿಕೊಳ್ಳುತ್ತಾರೆ. ಎಲ್ಲಾ ಜಾತಿಯ ಕೆಲವು ಪುರುಷರು ಹಣೆಗ ಕುಂಕುಮ ವಿಭೂತಿ ಧರಿಸುತ್ತಾರೆ. ಸ್ತ್ರೀಯರಲ್ಲಿ ಇತ್ತೀಚೆಗೆ ಹಣೆಬೊಟ್ಟುಗಳ ಬಳಕೆ ಹೆಚ್ಚಾಗಿದೆ. ಅಷ್ಟೇ ಅಲ್ಲದೆ ಕಣ್ಣಿಗೆ ಕಾಡಿಗೆ ಮುಖಕ್ಕೆ ಸ್ನೋ, ಪೌಡರ್, ಕೈಕಾಲುಗಳಿಗೆ ಮೆಹೆಂದಿ, ಉಗುರುಗಳಿಗೆ ಉಗುರುಬಣ್ಣ ಹೆಚ್ಚಿಕೊಳ್ಳುತ್ತಾರೆ. ಚಿಕ್ಕ ಮಕ್ಕಳನ್ನಂತೂ ಮನಸೂರೆಗೊಳ್ಳುವಂತೆ ಸಿಂಗರಿಸುತ್ತಾರೆ.

ಹೀಗೆ ಸಾಮಾಜಿಕವಾಗಿ ಕಬ್ಬತ್ತಿ ಗ್ರಾಮವನ್ನು ಸಮೀಪಿಸಿದಾಗ ಅರೆಮಲೆನಾಡು ಪ್ರದೇಶದ ಗ್ರಾಮವೊಂದರ ಲಕ್ಷಣಗಳನ್ನೇ ಒಳಗೊಂಡಿದ್ದು ವಿವಿಧ ಜಾತಿಯ

ಜನರೆಲ್ಲರೂ ಸಹ ಶಾಂತಿಯ ಸಹಬಾಳ್ವೆಯಿಂದ ಜೀವನ ಸಾಗಿಸುತ್ತಿದ್ದು ಜಾತಿ-ಜಾತಿಗಳ ನಡುವೆ ವೈಷಮ್ಯ ಕಂಡು ಬಂದಿಲ್ಲ. ಹಾಗೆಯೇ ಜಾತಿಗಳ ಕಟ್ಟುಪಾಡುಗಳು ಕಡಿಮೆಯಾಗಿವೆ. ಕೃಷಿ, ವ್ಯಾಪಾರ ಮತ್ತು ನೌಕರಿ ಮುಖ್ಯವಾದ ಆಥಿಕ ಚಟುವಟಿಕೆ-ಗಳಾಗಿದ್ದು ಸಾಮಾನ್ಯ ಮಟ್ಟದ ಆರ್ಥಿಕ ಸಾಮರ್ಥ್ಯ ಹೊಂದಿರುವುದು ಒಟ್ಟಿನಲ್ಲಿ 'ಸಾಮಾಜಿಕ ವ್ಯವಸ್ಥೆಯ' ವೈಶಿಷ್ಟ್ಯಪೂರ್ಣವಾಗಿದೆ ಎಂದು ಹೇಳಬಹುದು.

**ನಾಲ್ಕು ಜನಪದ ಆಟಗಳು:**

ಜಾನಪದ ಆಟವೆಂದರೆ ಎಲ್ಲ ಮಾನವ ಜೀವಿಗಳಲ್ಲಿಯೂ ಸಾಮಾನ್ಯವಾಗಿರುವ ಭಾವ ಪ್ರದರ್ಶನ ನಡವಳಿಕೆಯ ರೂಪವೇ ಆಗಿದೆ. ಇದು ಕಲೆ, ಭಾಷೆ, ಸಾಹಿತ್ಯ, ನೃತ್ಯ, ಸಂಗಿತ ಇತ್ಯಾದಿಗಳಲ್ಲಿ ಕಂಡುಬರಬಹುದು. ಜನಪದರಲ್ಲಿರುವ ಮರಕೋತಿಯಾಟ, ಪಗಡೆಯಾಟ, ಜೂಜಾಟ ಅವರ ಶ್ರಮವನ್ನು ಮುಗಿಸಿ ಬಂದ ತರುವಾಯ ಮುದಕ್ಕಾಗಿ ಮನಃ ಸಂತೋಷಕ್ಕಾಗಿ, ಕಾಲಹರಣ ಮಾಡುವುದಕ್ಕಾಗಿ ಮಕ್ಕಳಿಂದ ಹಿಡಿದು ಹಲ್ಲು ಉದುರುವ ಮುದುಕರವರೆಗೆ ಹೆಣ್ಣು ಗಂಡು ಆಡುವಂತ ಆಟಗಳಾಗಿರುತ್ತವೆ.

**ಬುಗುರಿಆಟ:** ಬುಗುರಿ ಆಟವನ್ನು ಗಂಡು ಮಕ್ಕಳು ಮಾತ್ರ ಆಡುತ್ತಾರೆ. ಇಲ್ಲಿ ಮುಖ್ಯವಾಗಿ ಅಂದರೆ ಗಂಡುಮಕ್ಕಳಲ್ಲಿ ಚಿಕ್ಕವರಿಂದ ಹಿಡಿದು ಯುವಕರವರೆಗೂ ಆಟವಾಡುತ್ತಾರೆ. ಬುಗುರಿ ಆಟವನ್ನು ಆಡುವುದರಲ್ಲಿ ಹಲವಾರು ರೀತಿಯಲ್ಲಿ ಆಟವಾಡುವುದನ್ನು ಕಾಣಬಹುದು. ಆದರೆ ಈ ಊರಿನಲ್ಲಿ ಒಂದು ಬುಟ್ಟಗುನ್ನ ಒಂದು ಬಗೆಯದಾಗಿದೆ. ಈ ಆಟದಲ್ಲಿ ಇಬ್ಬರು ಆಟಗಾರರಿದ್ದು ಒಬ್ಬ ಮೊದಲು ಬುಗುರಿಯನ್ನು ನೆಲಕ್ಕೆ ಬಿಟ್ಟು ಆಡಿಸಿದರೆ ಮತ್ತೊಬ್ಬ ತನ್ನ ಬುಗುರಿಯಿಂದ ರಭಸವಾಗಿ ನೆಲದಲ್ಲಿ ಆಡುವ ಬುಗುರಿಗೆ ಒಡೆದು ಗುನ್ನ ಹಾಕುವುದಾಗಿದೆ. ಇದರಲ್ಲಿ ಇನ್ನೊಂದು ರೀತಿ ಆಡುಬಹುದು. ಅದಕ್ಕೆ ಗುನ್ನ ಹುಯ್ಯವಾಟ ಎಂದು ಹೆಸರು. ಈ ಗುನ್ನ ಹುಯ್ಯವಾಟದಲ್ಲಿ ಇಬ್ಬರಿಗಿಂತ ಹೆಚ್ಚು ಮಂದಿ ಇದ್ದು ಒಂದೂವರೆ ಅಡಿಯ ಒಂದು ವೃತ್ತವನ್ನು ಎಳೆದು ಮಧ್ಯೆ ಒಂದು ಕಡ್ಡಿಯನ್ನು ಹಾಕುತ್ತಾರೆ. ಎಲ್ಲರೂ ಕ್ರಮವಾಗಿ ಯಾರಾದರೂ ವೃತ್ತದ ಒಳಗಿನ ಕಡ್ಡಿಯನ್ನು ಬುಗುರಿಯಿಂದ ಹೊರತೆಗೆದ ತಕ್ಷಣ ಬುಗುರಿಯನ್ನು ನೆಲಕ್ಕಾಡಿಸಿ ಅದರ ದಾರದಿಂದ 'ಅಪ್ಪಿಟ್' ಎಂದು ಆತುಕೊಳ್ಳಬೇಕು. ಯಾರು ಕೊನೆಯಲ್ಲಿ ಆತುಕೊಳ್ಳುತ್ತಾರೋ ಅಥವಾ ಕೈಯಿಂದ ನೆಲಕ್ಕೆ ಬೀಳಿಸುತ್ತಾರೋ ಅವರು ಸೋತು ತಮ್ಮ ಬುಗುರಿಯನ್ನು ನೆಲಕ್ಕೆ ಮಡಗುವುದು. ಉಳಿದ ಎಲ್ಲಾ ಆಟಗಾರರು ತಮ್ಮ ಬುಗುರಿಯಿಂದ ಒಂದು ಗುನ್ನ ಒಡೆಯುತ್ತಾರೆ. ಬುಗುರಿಯು ವೃತ್ತದಿಂದ ಹೊರಗೆ ಓಡಿದರೆ ಎಲ್ಲರೂ ಬುಗುರಿಯನ್ನು ಒಂದು ಸಾರಿ ಆಡಿಸಿ ಅಪ್ಪಿಟ್ಟ ಎಂದು ಆತುಕೊಳ್ಳಬೇಕು.

ಹೀಗೆ ಒಬ್ಬೊಬ್ಬರಲ್ಲಿಯೂ ಇಂತಹ ಸನ್ನಿವೇಶ ಉಂಟಾದಾಗ ಈ ನಿಯಮವನ್ನು ಎಲ್ಲರೂ ಅನುಸರಿಸುತ್ತಾರೆ. ಇದು ಗ್ರಾಮೀಣ ಪ್ರದರ್ಶನದ ಮಳೆಗಾಲದ ಸಂದರ್ಭದಲ್ಲಿ ಬುಗುರಿಯಾಡುವುದು ಕಂಡುಬರುತ್ತದೆ.

**ಗೋಲಿಯಾಟ:** ಈ ಊರಿನ ಜನಪದ ಆಟಗಳಲ್ಲಿ ಗೋಲಿಯಾಟವು ಒಂದಾಗಿದ್ದು, ಇದೂ ಕೂಡ ಗಂಡು ಮಕ್ಕಳು ಆಡುವ ಆಟವಾಗಿದ್ದು ಇದರಲ್ಲಿ ಹಲವಾರು ಬಗೆಯಾಗಿ ಆಡುವುದನ್ನು ಕಾಣಬಹುದು.

ಹೊಟ್ಟೆ:- ಇದು ಒಂದು ವೃತ್ತಾಕಾರವಾಗಿ ಗೋಲಿಯನ್ನು ಪೂಜಿಸಿ ಒಂದಕ್ಕೊಂದು ಸಂದಿಸಬಾರದಂತೆ ಪೂಜಿಸುತ್ತಾರೆ. ಆಟವಾಡುವವರು ಗೋಲಿಗಳನ್ನು ಒಂದು ಕಡೆ ಸಂಗ್ರಹಿಸಿ ಕೈಗಳಿಂದ ಮುದ್ರಿಸಿಕೊಂಡು ಕಲ್ಲಲ್ಲೆ ನೆಲಕ್ಕೆ ಎಸೆಯುತ್ತಾರೆ. ಇದರಿಂದ ಯಾರೂ ಹೆಚ್ಚು ದೂರಕ್ಕೆಸೆಯುತ್ತಾರೋ ಅವರು ಮೊದಲು ಗೋಲಿಯನ್ನು ಹೊಡಯುವುದು. ಹೀಗೆ ಕ್ರಮವಾಗಿ ಹೊಡಯುತ್ತಾ ಒಂದಕ್ಕೊಂದು ಸಂದಿಸದಂತೆ ಆಡಿಸಿದರೆ ಎಲ್ಲಾ ಗೋಲಿಗಳು ಆತನಿಗೆ ಹೋಗಿ ಆತ ಗೆದ್ದಂತೆ.

ಖಾಲಿ ಪೇಂದ ಉಡೀಸ್: ಈ ಆಟದಲ್ಲಿ ಎರಡು ತಂಡಗಳಾಗಿ ಮಾಡಿಕೊಂಡು ಒಂದೊಂದು ಕಡೆಯವರು ಇಬ್ಬಿಬ್ಬರು ಇಲ್ಲವೋ ಮೂವರಿದ್ದು ಆಟ ಪ್ರಾರಂಭಿಸುತ್ತಾರೆ. ಒಬ್ಬರಿಗೊಂದು ಗೋಲಿಯಂತೆ ಪೇಂದಾ ಮನೆಯಲ್ಲಿ ಪೂಜಿಸಬೇಕು. ಅಂದರೆ ಗೋಲಿಗಳನ್ನು ನಾಲ್ಕು ಗೆರೆಗಳ ಮಧ್ಯೆ ಜೋಡಿಸುವುದನ್ನೇ ಖಾಲಿ ಪೇಂದಾ ಎಂದು ಕರೆಯುತ್ತಾರೆ.

ಆಟವಾಡುವುದಕ್ಕಿಂತ ಮುಂಚಿತವಾಗಿ ಮೊದಲು ಯಾರು ಕಟ್ಟಬೇಕು ಎಂದು ನಿರ್ಧರಿಸಿ ಪ್ರಾರಂಭಿಸುತ್ತಾರೆ. ಗೋಲಿಯನ್ನು ಪೇಂದದಲ್ಲಿ ಪೂಜಿಸಿದಾಗ ಸ್ವಲ್ಪ ದೂರದಲ್ಲಿ ನಿಂತು ಗೋಲಿಯನ್ನು ಎಸೆಯಬೇಕು. ಪೇಂದ ಮನೆಗೆ ಹತ್ತಿರವಿದ್ದವರು ಗೋಲಿಯಿಂದ ಒಡೆಯಬೇಕು. ಎಸೆದಂತಹ ಗೋಲಿಯೇನಾದರೂ ಪೇಂದದ ಮನೆಯೊಳಗೆ ಹೊದರೆ ಇಲ್ಲವೇ ಪೇಂದದ ಹತ್ತಿರ ಮೂರು ಬೆರಳಿಡುವ ಜಾಗದಷ್ಟು ಹತ್ತಿರವಿದ್ದರೆ ಆ ಗೋಲಿಯನ್ನು ಪೇಂದದೊಳಗೆ ಪೂಜಿಸಬೇಕು. ಅನಂತರದಲ್ಲಿ ಆಚೆಗೆ ಬರುವಂತೆ ಹೊಡೆಯಬೇಕು. ಪೇಂದದಲ್ಲಿರುವ ಎಲ್ಲಾ ಗೋಲಿಗಳು ಹೊರಗೆ ಬಂದಾಗ ಖಾಲಿ ಪೇಂದ ಉಡಿಸ್ ಆದಂತೆ ಆಗ ಗೋಲಿಯನ್ನು ಪೂಜಿಸಲು ಬರೆದಂತಹ ಗೆರೆಗಳನ್ನು ಅಳಿಸಿ ಹಾಕಿ ಸೋತವರ ಗೋಲಿಗಳನ್ನು ಹೊಡೆದುಕೊಂಡು ಹೋಗುವುದು. ಅನಂತರದಲ್ಲಿ ಆಟ ಮುಗಿದ ತಕ್ಷಣ ಸೋತವರು ಪೇಂದದ ಒಳಗಡೆ ಗೋಲಿಯನ್ನು ಕೈ ಮೊಳಸಂದಿನಿಮದ ದೇಕಬೇಕು. ಹೀಗೆ ದೇಕುವಾಗ ಹಿಂದಿನಿಂದ ಗೆದ್ದವರು ಸೊತವರನ್ನು ಹಂಗಿಸುತ್ತಾ ಬರುತ್ತಾರೆ. ಇದೆಲ್ಲಾ ಸಂತೋಷಕ್ಕಾಗಿಯಷ್ಟೇ ಈ ಖಾಲಿ ಪೇಂದ ಉಡೀಸ್ ಆಟದಲ್ಲಿ ಬರುವ ಪ್ರಾಸ ಪದ

ಹಂಚಿನ ಕಡ್ಡಿ
ಮಂಚದ ಪಾದ
ದಳವೇ ದಡ್ಡ
ಕುಳವೇ ಕುಂಟ
ನಿಂಗಾಲರ ಹೆಣ್ಣೇ
ನೆಕ್ಕೋತು

**ಮರಕೋತಿಯಾಟ:** ಮರಕೋತಿಯಾಟವು ತುಂಬಾ ಪ್ರಾಚೀನವಾದ ಆಟವಾಗಿದೆ. ಪಾಂಡವರು ಮತ್ತು ಕೌರವರು ಚಿಕ್ಕವಯಸ್ಸಿನಲ್ಲಿ ಮರಕೋತಿಯಾಟವಾಡುತ್ತಿದ್ದಾಗ ಭೀಮನ ಕೋಪದಿಮದ ಮರವನ್ನೇ ಅಲ್ಲಾಡಿಸಿ ಎಲ್ಲರನ್ನೂ ಕೆಳಗೆ ಬೀಳಿಸಿದ ಘಟನೆ ಮಹಾಭಾರತದಲ್ಲಿ ಉಲ್ಲೇಖವಿದೆ. ಮರಕೋತಿಯಾಟವನ್ನು ಹಲವಾರು ಮಂದಿ ಸೇರಿ ಆಡುವುದಾಗಿದೆ. ಈ ಊರಿನ ಮುಖ್ಯ ರಸ್ತೆಯಲ್ಲಿರುವ ಶಾಲೆಗೆ ಹತ್ತಿರವಿರುವ ಹುಣಸೆ ಮರದಲ್ಲಿ ಈ ಆಟ ಆಡುತ್ತಾರೆ. ಆಟಕ್ಕೆ ಮೊದಲು ಆಟಗಾರರೆಲ್ಲರು ಸೇರಿ ಎಲ್ಲರ ಕೈಕೈ ಹಸ್ತದ ಮೇಲಿಟ್ಟು ಮೆಲೆ ಕೆಳಗೆ ತಾಳ ಹಾಕುವರು. ಎಲ್ಲರದೂ ಒಂದೇ ರೀತಿ ಒಬ್ಬನು ಬೇರೆ ರೀತಿ ಇದ್ದರೆ ಅವನು ಸೋತಂತೆ ಸೋತವನು ಮರದ ಮೇಲಿರುವ ಯಾರನ್ನಾದರೂ ಒಬ್ಬರನ್ನು ಮುಟ್ಟಿದರೆ ಆತ ಸೋತಂತೆ ಹೀಗೆ ಆಟ ಮುಂದುವರೆಯುತ್ತದೆ. ಎಲ್ಲರೂ ಮರವನ್ನು ಏರಿದ ಮೆಲೆ ಒಬ್ಬನು ಕೆಳಗೆ ನಿಂತು ಮರದ ಪಕ್ಕ ಒಂದು ಚಿಕ್ಕ ವೃತ್ತವನ್ನೆಳೆದು ಅದರಲ್ಲಿ ನಿಂತು ಒಂದು ಕಡ್ಡಿಯನ್ನು ಸ್ವಲ್ಪ ದೂರಕ್ಕೆ ಎಸೆಯುತ್ತಾನೆ. ಸೋತವರು ಹೋಗಿ ಆ ಕಡ್ಡಿಯನ್ನು ತರುವುದರೊಟ್ಟಿಗೆ ಅವನು ಮರವನ್ನು ಏರಿ ಕುಳಿತಿರಬೇಕು. ಕೋತಿಯಾದವನು ಕೋಲನ್ನು ತಂದು ಮರದ ಕೆಳಗೆ ವೃತ್ತದಲ್ಲಿದ್ದು ಮರದ ಮೇಲಿರುವ ಉಳಿದ ಆಟಗಾರರಲ್ಲಿ ಯಾರು ಸಿಗುತ್ತಾರೋ ಎಂದು ಕಾಯುತ್ತಿರಬೇಕು. ಹಾಗೆ ಮರದ ಮೆಲೆ ಏರಿ ಯಾರನ್ನಾದರೂ ಹಿಡಿಯಲು ಪ್ರಯತ್ನಿಸುತ್ತಾನೆ. ಹೀಗೆ ಹಿಡಿಯಲು ಪ್ರಯತ್ನಿಸುತ್ತಿರುವಾಗ ಯಾವನಾದರೊಬ್ಬ ಕೆಳಕ್ಕೆ ಧುಮುಕಿ ಆ ಕಡ್ಡಿಯನ್ನು ತೆಗೆದುಕೊಂಡು ಬಿಟ್ಟರೆ ಮತ್ತೆ ಆ ಹಳೆಯ ಕೋತಿಯೇ ಹಿಡಿಯಬೇಕಾಗುತ್ತದೆ. ಹೀಗೆ ಪದೇ ಪದೇ ಯಾರನ್ನಾದರೂ ಹಿಡಿಯುವ ತನಕ ಅವನನ್ನೇ ಕೋತಿಯನ್ನಾಗಿ ಮಾಡಿ ಉಳಿದ ಆಟಗಾರರೂ ಸತಾಯಿಸುತ್ತಾ ಸಂತೋಸಪಡಿಸುತ್ತಾರೆ.

**ಕಣ್ಣಾಮುಚ್ಚಾಲೆ:** ಇದು ಚಿಕ್ಕ ಚಿಕ್ಕ ಮಕ್ಕಳಿಗೆ ತುಂಬಾ ಪ್ರಿಯವಾದ ಆಟವಾಗಿದೆ ಕಣ್ಣಾ ಮುಚ್ಚಾಲೆ ಆಟವನ್ನು ಅವತೆಗುಮ್ಮನಾದ ಎಂದು ಕರೆಯುತ್ತಾರೆ. ಈ ಆಟದಲ್ಲಿ ಮನೆಯಲ್ಲಿರುವ ಅಜ್ಜಿಯು ಪಾಲ್ಗೊಳ್ಳುತ್ತಾಳೆ. ಅಜ್ಜಿಯು ಕಣ್ಣಾಮುಚ್ಚಾಲೆಯ ಆಟದ ಪ್ರಾಸದ ಪದವನ್ನು ಹೇಳುತ್ತಾ ಆಟ ಪ್ರಾರಂಭಿಸುತ್ತಾಳೆ. ಅಜ್ಜಿಗೆ ವಿರಾಮವಿಲ್ಲದಿದ್ದಾಗ

ಬೇರೆ ಯಾರಾದರೂ ಕಣ್ಣುಮುಚ್ಚಬಹುದು. ಹೀಗೆ ಸೋತವರ ಕಣ್ಣು ಮುಚ್ಚುವವರನ್ನು ಮೋಟಿ ಎಂದು ಕರೆಯುತ್ತಾರೆ.

ಕಣ್ಣಾಮುಚ್ಚಾಲೆಯಾಟದಲ್ಲಿ ಗಮಡು ಮಕ್ಕಳು ಹೆಣ್ಣು ಮಕ್ಕಳು ಒಟ್ಟಾಗಿ ಸೇರಿ ಆಡುತ್ತಾರೆ. ಇಲ್ಲಿ ಸೋತವರು ಉಳಿದವರನ್ನು ಹಿಡಿಯಲು ಸಜ್ಜಾಗುತ್ತಾರೆ. ಮೋಟಿಯು ಸೋತವಳ ಕಣ್ಣುಮುಚ್ಚಿಕೊಂಡು ಕಣ್ಣಾಮುಚ್ಚಾಲೆಯ ಪ್ರಾಸದ ಪದವನ್ನು ಹಾಡುತ್ತಿರುತ್ತಾಳೆ. ಆಗ ಉಳಿದವರೆಲ್ಲ ಬೇರೆ ಬೇರೆ ಕಡೆ ಅವಿತುಕೊಳ್ಳುತ್ತಾರೆ. ಆ ಪ್ರಾಸ ಹೀಗಿದೆ.

ಕಣ್ಣಾಮುಚ್ಚೆ
ಕಾಡೇ ಗೂಡೇ
ಉದ್ದಿನ ಮೂಟೆ
ಉರುಳೇ ಹೋಯ್ತು
ನಮ್ಮಯ ಹಕ್ಕಿ
ಬಿಟ್ಟೆ ಬಿಟ್ಟೆ
ನಿಮ್ಮಯ ಹಕ್ಕಿ
ಹುಡಿಕೆ ಬಾ

ಎಂದು ಹೇಳಿ ಕಣ್ಣುಮುಚ್ಚಿದನ್ನು ತೆರೆಯಬೇಕು. ಆಗ ಕಣ್ಣುಮುಚ್ಚಿಸಿಕೊಂಡಿರುವವರು ಅಲ್ಲೇ ಎಲ್ಲೋ ಕಾಣದಂತೆ ಅವಿತುಕೊಂಡಿರುತ್ತಾರೆ. ಅವರನ್ನು ಹಿಡಿಯಲು ಹೋಗುವಾಗ ಹಿಡಿಯುವವರಿಗೆ ಗೊತ್ತಿಲ್ಲದಂತೆ ಪುನಃ ಬೇರೆ ಉಳಿದವರು ಬಂದು ಕಣ್ಣು ಮುಚ್ಚಿಸುತ್ತಿದ್ದ ಮೋಟಿಯನ್ನು ಮುಟ್ಟಿದರೆ ಪುನಃ ಅವರೇ ಸೋತಂತೆ ಹಿಡಿಯಲು ಹೋದವರ ಕಣ್ಣು ತಪ್ಪಿಸಿ ಸಿಕ್ಕದೆ ಓಡಿಬಂದು ಮೋಟಿಯನ್ನು ಮುಟ್ಟಿಬಿಟ್ಟರೆ ಅವರು ಗೆದ್ದಂತೆ. ಯಾರನ್ನಾದರೂ ಹಿಡಿದರೆ ಅವರು ಸೋತಂತೆ ಅನಂತರದಲ್ಲಿ ಹಿಡಿಸಿಕೊಂಡವನು ಕಣ್ಣು ಮುಚ್ಚಿಸಿಕೊಳ್ಳಬೇಕು. ಅವನು ಉಳಿದ ಆಟಗಾರರಲ್ಲಿ ಬೇರೆ ಯಾರನ್ನಾದರೂ ಹಿಡಿಯಬೇಕಾಗುತ್ತದೆ. ಹೀಗೆ ಆಟ ಒಬ್ಬರನ್ನೊಬ್ಬರು ಹಿಡಿಯುವಂತೆ ಮುಂದುವರಿಯುತ್ತಿರುತ್ತದೆ. ಹೀಗೆ ಆಟವಾಡುತ್ತ ಖುಷಿ ಪಟ್ಟ ಮಕ್ಕಳು ಅಯಾಸಗೊಂಡಾಗ ತಮ್ಮ ತಮ್ಮ ಮನೆಗೆ ತೆರಳುತ್ತಾರೆ.

ಸಾಮಾನ್ಯವಾಗಿ ಈ ಆಟವನ್ನು ಶಾಲೆಯಿಂದ ಬಂದ ಮಕ್ಕಳು ಸಂಜೆಯ ವೇಳೆಯಲ್ಲಿ ಆಡುವುದು ಹೆಚ್ಚು. ಮನೆಯಲ್ಲಿರುವ ಹಿರಿಯರು ತಮ್ಮ ಕೆಲಸಗಳಿಂದ ದಣಿದು ಬಂದಿರುತ್ತಾರೆ. ಅವರಿಗಂತೂ ಮಕ್ಕಳ ಈ ಕಣ್ಣಮುಚ್ಚಾಲೆ ಆಟವನ್ನು ನೋಡಿ ಸಂತೋಷವಾಗುವುದರ ಜೊತೆಗೆ ತಮ್ಮ ಆಯಾಸವನ್ನು ಮರೆಯುತ್ತಾರೆ.

**ಲಗೋರಿಯಾಟ:** ಈ ಊರಿನ ಜನಪದ ಆಟಗಳಲ್ಲಿ ಲಗೋರಿ ಆಟವು. ಒಂದು ಜನಪದರಲ್ಲಿ ಚೆಂಡಾಟವು ತುಂಬ ಪ್ರಸಿದ್ಧವಾದುದು. ಇತ್ತೀಚೆಗೆ ರಬ್ಬರಿನಿಂದ ಮಾಡಿದ ಚೆಂಡು ಸಿಗುತ್ತದೆ. ಮೊದಲಿಗೆ ಬಟೆಯಿಂದ ಸುತ್ತಿದ್ದ ಚೆಂಡಿನಿಂದ ಆಟವಾಡುತ್ತಿದ್ದರು. ಆದರೆ ಈಗಂತೂ ರಬ್ಬರ್, ಪ್ಲಾಸ್ಟಿಕ್ ಇತ್ಯಾದಿ ಬಗೆಯ ಚೆಂಡುಗಳನ್ನು ಕಾಣಬಹುದು.

ಆಟಕ್ಕೆ ಮೊದಲು ಎರಡು ತಂಡಗಳನ್ನು ಮಾಡಿಕೊಂಡು ಆಟಕ್ಕೆ ಸಿದ್ಧವಾಗಬೇಕು. ಒಂದೊಂದು ತಂಡದಲ್ಲಿ ನಾಲ್ಕೈದು ಮಂದಿ ಆಟಗಾರರಿರುತ್ತಾರೆ. ಆಟವನ್ನು ಮೊದಲು ಯಾರು ಪ್ರಾರಂಭಿಸಬೇಕೆಂದು ನಿರ್ಧರಿಸಲು ನಾಣ್ಯ ಚಿಮ್ಮುವ ಮೂಲಕ ನಿರ್ಧರಿಸಲಾಗುತ್ತದೆ. ಲಗೋರಿ ಕಟ್ಟಲು ಹಂಚಿನ ಬಕರೆಗಳನ್ನು ಸಹ ಬಳಸಲಾಗುತ್ತದೆ. ಇದನ್ನು 'ಲಗ್ಗೆ' ಎಂದು ಕರೆಯುತ್ತಾರೆ. ಎದುರಾಳಿಗಳ ಕೆಲಸ ತಮ್ಮ ವಿರುದ್ಧ ಕಡೆಯವರುಲಗ್ಗೆಗೆ ಬಾರಿಸಿದ ಚೆಂಡು ಹಿಂದಕ್ಕೆ ನೆಗೆದಿದ್ದರೆ ಅದನ್ನು ಹಿಡಿಯುವುದು. ಹಾಗಾಗಿ ಒಂದು ಕಡೆಯವರು ಲಗೋರಿಗೆ ಹೊಡೆಯುವುದಕ್ಕೆ ನಿಲ್ಲುವರು. ಮತ್ತೊಂದು ಪಕ್ಷದವರು ಲಗ್ಗೆಯನ್ನು ಕಾಯುವುದಕ್ಕೂ ನಿಂತುಕೊಳ್ಳುವರು. ಸುಮಾರು ೮-೧೦ ಗಜ ದೂರದಲ್ಲಿ ಒಡೆದ ಹಂಚಿನ ತುಂಡುಗಳನ್ನು ಏಳು ಬಕರೆಗಳಾಗಿ ಮಾಡಿಕೊಂಡು ಒಂದರ ಮೇಲೊಂದರಂತೆ ಕಟ್ಟಿರುತ್ತಾರೆ. ಲಗೋರಿಗೆ ಗುರಿಯಿಟ್ಟು ಚೆಂಡಿನಿಂದ ಹೊಡೆದು ಬೀಳಿಸಿದಾಗ ಎದುರಾಳಿ ತಂಡದವರು ಕಟ್ಟಬೇಕಾಗಿರುವುದೇ ಈ ವೇಳೆಯಲ್ಲಿ ಬೀಳಿಸಿದವರು ಒಂದೆಡೆ ಸೇರಿ ತಮ್ಮಲ್ಲೊಬ್ಬೊಬ್ಬರ ವಶಕ್ಕೆ ನೀಡಿ ಯಾರೋ ಒಬ್ಬರ ಹತ್ತಿರ ಇದ್ದರೂ ಎಲ್ಲರ ಹತ್ತಿರವೂ ಇರುವಂತೆ ನಟಿಸುವರು. ಯಾರ ಬಳಿ ಚೆಂಡಿದೆ ಎಂದು ಎದುರಾಳಿಗೆ ತಿಳಿಯದಂತೆ ನಟಿಸುತ್ತ ಲಗೋರಿಯನ್ನು ಕಟ್ಟಲು ಬಂದಾಗ ಹೊಡೆಯಲು ಕಾಯುತ್ತಿರುತ್ತಾರೆ. ಎದುರಾಳಿಗಳು ಚೆಂಡನ್ನು ಗುರುತಿಸಿದರೆ ಅವಿಸಿಟ್ಟುಕೊಂಡಿರುತ್ತಾರೆ. ಹಾಗೆ ಆಟ ಮುಂದುವರೆಸುತ್ತ ಲಗೋರಿಯನ್ನು ಕಟ್ಟಲು ಒಂದು ಕೆಳಗೆ ಚೆಲ್ಲಿಪಿಲ್ಲಿಯಾಗಿ ಬಿದ್ದಿರುವ ಬಕರೆಗಳನ್ನು ಸರಿಯಾಗಿ ಜೋಡಿಸಬೇಕು. ಹೀಗೆ ಜೋಡಿಸಿದರೆ ಆಟ ಗೆದ್ದಂತೆ.

ಪ್ರಸ್ತುತ ಜನಪದ ಆಟಗಳು ಈ ಗ್ರಾಮದ್ಲಲಿ ಮಾತ್ರವಲ್ಲದೆ ಬಹುತೇಕ ಗ್ರಾಮಗಳಲ್ಲಿಯೂ ನಶಿಸಿ ಹೋಗುತ್ತಿವೆ ಇಂದು ಸಮೂಹ ಮಾಧ್ಯಮಗಳ ಪ್ರಭಾವ ಹೆಚ್ಚಾಗಿ ಗ್ರಾಮೀಣ ಪ್ರದೇಶದ ಜನರು ಈ ಆಟಗಳನ್ನು ಮರೆಯುತ್ತಿದ್ದಾರೆ. ಜನಪದ ಆಟಗಳ ಸ್ಥಾನವನ್ನು ಸಮೂಹ ಮಾಧ್ಯಮಗಳಾದ ದೂರದರ್ಶನ, ರೇಡಿಯೋ ಮೊದಲಾದವುಗಳು ಆಕ್ರಮಿಸಿಕೊಂಡಿವೆ. ಹೀಗಾಗಿ ಸಮೂಹ ಮಾಧ್ಯಮಗಳ ಪ್ರಭಾವ ತಪ್ಪಿಸಿ ಜನಪದ ಕ್ರೀಡೆಗಳನ್ನು ಉಳಿಸಬೇಕಾದದ್ದು ನಮ್ಮಗಳ ಕರ್ತವ್ಯವಾಗಿದೆ.

# ಉಪಸಂಹಾರ

ಸಾಂಸ್ಕೃತಿಕ ಅಧ್ಯಯನ ಎಂಬುದು ತುಂಬಾ ವ್ಯಾಪಕವಾದದ್ದು. ಮತ್ತು ವಿಶಾಲ ಅಧ್ಯಯನದ ವ್ಯಾಪ್ತಿಯನ್ನು ಹೊಂದಿದೆ. ಇಂದು ಈ ರೀತಿಯ ಅಧ್ಯಯನ ಅಧಿಕ ಪ್ರಮಾಣದಲ್ಲಿ ನಡೆಯುತ್ತಿದೆ. ಯಾವುದೇ ಅಧ್ಯಯನ ವಿಭಾಗವನ್ನು ಸಾಂಸ್ಕೃತಿಕ ಅಧ್ಯಯನದ ನೆರಳಿನಲ್ಲಿ ನೋಡಲಾಗುತ್ತಿದೆ. ಇಂತಹ ಅಧ್ಯಯನದ ಫಲವೇ 'ಶ್ರೀಕ್ಷೇತ್ರ ಕಬ್ಬತ್ತಿ: ಒಂದು ಸಾಂಸ್ಕೃತಿಕ ಅಧ್ಯಯನ'

ಹಾಸನ ತಾಲ್ಲೂಕಿನ ಒಂದು ಗ್ರಾಮವಾದ ಇದು ತನ್ನದೇಯಾದ ಸಂಸ್ಕೃತಿಯನ್ನು ಹೊಂದಿ ವಿಶಿಷ್ಟವಾಗಿದೆ. ಈ ಗ್ರಾಮದ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಕುರಿತ ಅಧ್ಯಯನ ಈ ನಿಬಂದದಲ್ಲಿ ನಡೆದಿದೆ. ಸಾಂಸ್ಕೃತಿಕ ಅಧ್ಯಯನವೆಂದರೆ ಆ ಪ್ರದೇಶದ ಸಾಮಾಜಿಕ, ಧಾರ್ಮಿಕ ಆಚರಣೆ, ಸಂಪ್ರದಾಯಗಳು, ಉತ್ಸವಗಳು, ನಂಬಿಕೆಗಳು ಇವೇ ಮುಂತಾದವುಗಳ ಅಧ್ಯಯನವಾಗಿದೆ. ಅದೇ ರೀತಿ ಈ ನಿಂಬಂಧದಲ್ಲಿ ನಾನು ಕಬ್ಬತ್ತಿ ಗ್ರಾಮದಲ್ಲಿ ಕಂಡುಬರುವ ಸಾಂಸ್ಕೃತಿಕ ವಿಷಯಗಳ ಬಗ್ಗೆ ಚರ್ಚಿಸಿದ್ದೇನೆ.

ಕಬ್ಬತ್ತಿ ಗ್ರಾಮದ ಭೌಗೋಳಿಕ ನೆಲೆಯನ್ನು ಗುರುತಿಸುವ ಮೂಲಕ ಆ ಪ್ರದೇಶದ ಐತಿಹಾಸಿಕ ಹಿನ್ನೆಲೆಯನ್ನು ಲಭ್ಯ ಆಕರ ಆಧಾರಗಳಿಂದ ತಿಳಿಸಲಾಗಿದೆ. ಈ ಅಂಶಗಳಿಂದ ಮುಂದುವರಿದು ಅಲ್ಲಿಯ ಸಮಾಜದ ವಿವಿಧ ಶ್ರೇಣಿಗಳನ್ನು ಗುರುತಿಸಲಾಗಿದೆ. ಧಾರ್ಮಿಕ ವ್ಯವಸ್ಥೆ ಇವರ ಪ್ರದೇಶಗಳ ರೀತಿಯಲ್ಲೆ ಇದ್ದು ಕೆಲವಾರು ವೈಶಿಷ್ಟ್ಯಗಳನ್ನು ಹೊಂದಿದೆ. ಆ ಅಂಶಗಳನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಸಂಪ್ರದಾಯಗಳು, ಉಡುಗೆ–ತೊಡುಗೆ, ಹಬ್ಬಗಳು, ಆಚರಣೆಗಳು ಇವೇ ಮುಂತಾದವುಗಳನ್ನು ಸಾಧ್ಯವಾದಷ್ಟು ತಿಳಿಸುವ ಪ್ರಯತ್ನ ಮಾಡಲಾಗಿದೆ. ಜನಪದ ಸಂಸ್ಕೃತಿ ಮತ್ತು ಶಿಷ್ಟ ಸಂಸ್ಕೃತಿಗಳ ನಡುವೆ ಗೆರೆಯೆಳೆಯಲು ಸಾಧ್ಯವಾಗದ ರೀತಿಯ ಸಮ್ಮಿಶ್ರ ಸಂಸ್ಕೃತಿಯಲ್ಲಿ ಜನಪದ ಸಂಸ್ಕೃತಿಯ ಜೀವಂತ ಸೆಲೆಯತ್ತ ಹೊರಳಿ ಅದರ ಆಕರ್ಷಣೆಗೆ ಒಳಗಾದಂತೆಯೇ ಶಿಷ್ಟ ಸಂಸ್ಕೃತಿಯ ಸೆಳೆತಕ್ಕೆ ಸಿಲುಕಿ ತಮ್ಮ ಬದುಕಿನಲ್ಲಿ ಈ ಎರಡರ ಸಾಮರಸ್ಯವನ್ನು ಅಳವಡಿಸಿಕೊಂಡ ಬಹುಪಾಲು ಜನರನ್ನು ಇಲ್ಲಿ ಕಾಣಬಹುದು. ಇಂತಹ ಮಧ್ಯಮ ಸಂಸ್ಕೃತಿಯ ಅತ್ಯುತ್ತಮ ಉದಾಹರಣೆಯಾಗಿ ಈ ಗ್ರಾಮ ನಿಲ್ಲುತ್ತದೆ.

ಸಾಂಸ್ಕೃತಿಕ ಅಧ್ಯಯನ ಎಂಬುದು ಸಂಕೀರ್ಣವಾದದು ಮತ್ತು ವ್ಯಾಪಕವಾದ ಅಧ್ಯಯನವನ್ನು ಅವಲಂಬಿಸಿರುವಂತದ್ದು. ಅದೇ ರೀತಿ 'ಶ್ರೀಕ್ಷೇತ್ರ ಕಬ್ಬತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ" ಕೂಡ ಸಂಕೀರ್ಣದ್ದಾಗಿದೆ. ಇದು ಒಂದು ಮಹಾ

ಪ್ರಬಂಧದ ವಿಷಯವಾಗುವಷ್ಟು ವಿಶಾಲವ್ಯಾಪ್ತಿಯನ್ನು ಹೊಂದಿದೆ. ಈ ನಿಬಂಧದಲ್ಲಿ ಸಾಧ್ಯವಾದಷ್ಟು ಸಂಕ್ಷಿಪ್ತ ರೂಪದಲ್ಲಿ ಸಾಂಸ್ಕೃತಿಕ ಅಧ್ಯಯನವನ್ನು ಶುದ್ಧಾಂಗವಾಗಿ ಜಾನಪದೀಯ ಹಿನ್ನೆಲೆಯಲ್ಲಿ ತಿಳಿಸಿಕೊಡಲಾಗಿದೆ. ಆದರೂ ಇಲ್ಲಿ ನಡೆಯಬೇಕಾದ ಕೆಲಸ ಇನ್ನು ಉಳಿದಿದೆ. ಆದುದರಿಂದ ವ್ಯಾಪಕವಾದ ಅಧ್ಯಯನ ನಡೆಯುವುದ ಅಗತ್ಯವಾಗಿದೆ. ಎಂದು ಹೇಳಬಹುದು.

# ಅನುಬಂಧಗಳು

## ೧. ಜಾನಪದ

ಶ್ರೀರಂಗನಾಥಸ್ವಾಮಿ ಕುರಿತಾದ ಜನಪದ ಗೀತೆಗಳು:

ರಂಗರಂಗಗಿಂತ ಯಾರಂಗ ಚಲುವ
ಸಕ್ಕರೆ ಪಟ್ಟಣದ ರಂಗಗಿಂತ
ಕಬ್ಬತ್ತಿ ರಂಗ ಕರ ಚಲುವ॥

ಕೆಂದಕುದುರೆ ಮೇಲೆ ಒಂದನೆ ರಂಗಯ್ಯ
ಬೆನ್ನು ಕಂಡೆಸೆ ಒಲುವುತ್ತ। ಕಬ್ಬತ್ತಿ
ಕಂಬಟ್ಟಲ್ಲಿಳಿದ ಕುದುರೆಯ॥

ಕರಿಯ ಕುದುರೆಗೆ ಉರಿಯ ಚೂರಿಪನ
ಕೆರೆಯೇರಿ ಮೆಲೆ ಬರುವ । ರಂಗಯ್ಯನ
ಜಡೆ ಹೋಗಿ ಮಡುವ ತುಡುಕ್ಯಾದೆ॥

ಕಲ್ಲಿನ ಗುಡಿಕಾನೊ ಕಂಚಿನ ಕದಕನೊ
ಅಲ್ಯವನೆ ನಮ್ಮ ಮನೆ ಸ್ವಾಮಿ। ನಾವು
ಇಲ್ಲಿಂದ ಕೈಯ್ಯ ಮುಗಿದೇವು.

ಬೆಟ್ಟದ ಸುತ್ತ ಬಿಟ್ಟರು ಹೂವಿನ ಮಾಲೆ
ಸುತ್ತ ಬಿಟ್ಟವರೇ ಪರಬಾಳೆ। ರಂಗಯ್ಯ
ನೆತ್ತಿಲಿ ಬಿಟ್ಟವರೆ ಕರಿಜಡೆ॥

ರಂಗಯ್ಯ ಬರುತ್ತಾನೆಂದು ಸಾರಿಸಿದೋ ಗುಡಿಸಿದೊ
ರಂಗಯ್ಯನ ಕುಟ್ಟಿರಮಣಿರು। ಬರುತ್ತಾರೆಂದು
ಅಂಗಳಕ್ಕೆ ರಂಗೋಲಿ ಹರಡಿದೋ

ಹೋಗಿ ನೋಡನ ಬನ್ನಿ ಹೂವಿನ ಪೂಜೆಯ
ಸ್ವಾಮಿ ರಂಗಯ್ಯನ ಕದಲಿಯ । ಪೂಜೆಯ
ಹೋಗಿ ನೋಡುವರಿಗೆ ಅಳುವಿಲ್ಲ॥

ಹಳ್ಳಕೊಳ್ಳದ ನೀರು ದಿಲ್ಲಿಯ ಕೈ ಚೆಂಬು
ಸ್ವಾಮಿ ರಂಗಯ್ಯಗೆ ಶಿವಪೂಜೆ। ಆಗುವಾಗ
ಕಲ್ಯಾಣದ ಗಂಟೆ ಗಲಿರೆಂದೋ

ಬೆಟ್ಟ ಹತ್ತುತ್ತಾ ಬೆಳ್ಳಿ ಚಂಡಾಡುತ್ತ
ಅಪಹಚ ಮುಂದೆ ಒದರುತ್ತಾ । ರಂಗಯ್ಯ
ಈ ಬೆಟ್ಟ ಹತ್ತಿದೆ ಬೆಳಗಾದೋ॥

ಗಿರಿಯ ಹತ್ತುತ್ತ ಕುರುಬೆವರ ಬೆವರುತ್ತಾ
ಚೆಳ್ಳೊಗರಲ್ಲ ಬೆವರವರಸುತ್ತಾ । ರಂಗಯ್ಯ
ನೀ ಗಿರಿಯ ಹತ್ತಿದೆ ಶನಿವಾರ॥

ಗಂಧದ ಗಮನಕ್ಕೆ ಹೊಂಬಾಳೆಧಾರಕ್ಕೆ
ಸ್ವಮಿ ರಂಗಯ್ಯ ಬೆವತಾನು। ಪೂಜಾರಿ
ಬೀಸಯ್ಯ ಬೆಳ್ಳಿ ಚವಲಾವ॥

ಮಲ್ಲಿಗೆ ಮಳೆಯಲ್ಲಿ ಎಲ್ಲಿದ್ದೆ ರಂಗಯ್ಯ
ನಾನು ಹೊಂಬಾಳೆಲಿದ್ದೆ ಅನುಗಾಲ । ಪೂಜಾರಿ
ಬೀಸಯ್ಯ ಬೆಳ್ಳಿ ಚವಲನ॥

ಸ್ವಾಮಿ ಮದುವೆಗೆ ಭೂಮಿ ಚಪ್ಪರ ಹೂಡಿ
ದಾಳಿಂಬೆ ಹಣ್ಣ ಹಸೆ ಹೂಡಿ । ರಂಗಯ್ಯ
ಸ್ವಾಮಿ ನಿನ್ನ ಮದುವೆ ಶನಿವಾರ

ರಂಗಯ್ಯ ಮದಲಿಂಗನ ಎಲ್ಲಾ ನೋಡಬನ್ನಿ
ಚಿನ್ನದ ಪರಬಾಳೆ ರವಿಸೂರ । ಬೆಟ್ಟದ
ಮೇಲೆ ರಂಗಯ್ಯ ರಾತ್ರಿಕೆ ॥

ಹೊತ್ತು ಸಾರಿ ಬೆಟ್ಟಕ್ಕೆ ಸುಣ್ಣ ಹೂದು
ರಂಗಯ್ಯ ಹೆಂಡತಿ ಬಿದಿಗಮ್ಮ । ಇರೋದು
ಕಲ್ಲು ಮಾಳಿಗೆ ಕೈಲಾಸ

ಹಸುರು ಬೆತ್ತದ ಕೋಲು ಕುಸುರಾದ ಬನವಾಸೆ
ಸ್ವಾಮಿ ರಂಗಯ್ಯನ ಹುಲಿಬ್ಯಾಬೆ । ಹೊರಬಾರೆ
ಕಸುಲಾದ ಕೊಂತಿ ದುರುಗಾಕೆ

ಬೆಳ್ಳಿ ಬೆತ್ತದ ಕೋಲು ಚಿನ್ನದ ಬನವಾಸೆ
ಸ್ವಾಮಿ ರಮಗಯ್ಯನ ಹಲುಬ್ಯಾಟೆ । ಹೊರಟಾರೆ
ಚನ್ನಂಗಿ ನಂಜೋ ದುರುಗಾಕೆ।

ಕಟ್ಟೋದು ಹೊಸತೇರು ಎಳೆಯೋರು ಹೊಸಮಕ್ಕಳು
ಈ ಊರಗೌಡ ಹಸುಮಗ । ರಂಗಯ್ಯ
ಹನ್ನೆರಡು ತುಪ್ಪ ಒಳಕೊಳೊ॥

ಬಮದ ಸರಸೆಯ ಮುಂದೆ ಬಸ್ಸು ಮಾಡಲು ಬ್ಯಾಡ
ಹೆಣ್ಣು ಮಕ್ಕಳವರೇ ಗುಡಿ ತುಂಬ । ನೀ ನೋಡಿ
ಸವಲಯ್ಯ ಅವರ ಕೋಪಗಾರ॥

ಹಣ್ಣುಕಾಯಿ ತಕ್ಕೊಂಡು ರಂಗಯ್ಯ ಗುಡಿಗೋಡೊ
ಗುಡಿಯಲ್ಲಿ ರಂಗಯ್ಯ ಸುಳಿವಿಲ್ಲಿ । ಪೂಜಾರಿ
ಹೂವು ತೇರು ತಾವ ದಯಮಾಡೋ॥

ಜೇನುತುಪ್ಪ ಬಂದೊ ಬಾಳೆಯ ಹಣ್ಣು ಬಂದೋ
ದಂಬಾರಿ ಬಂತೋ ನಿನ್ನ ಗುಡಿಗೇ ರಂಗಯ್ಯ
ಹಣ್ಣು ತೇರು ತಾವ ದಯಮಾಡೋ

ದೇವರಿಗೆ ಹೋವರಿಗೆ ಬಾಳೆಯ ಹಣ್ಣು ಬೇಕು
ಹಾದಿ ನಡೆಯೊರಿಗೆ ಎಲೆ ಬೇಕು । ರಂಗಯ್ಯ
ತೇರುತದ ಬಚ್ಚಲಿಗೆ ಹಣ ಬೇಕು॥

ದೇವರಿಗೆ ಹೋವರಿಗೆ ದಾವತಿ ನಮಗಿಲ್ಲ
ದಾರಿ ನಡೆದಾರಿ ದಾವತಿ ರಂಗಯ್ಯ
ದಾರಿ ನಡೆದಾರೆ ದಣಿವಿಲ್ಲ॥

ಸ್ವಾಮಿ ರಂಗಯ್ಯನೆ ಸ್ವಾಮಿ ಶರಣಯ್ಯನೆ
ಸ್ವಾಮಿ ರಂಗಯ್ಯ ಶರಣಯ್ಯ। ಬಲವಿದ್ದರೆ
ಕಣ್ಣಿಗೆ ನಿಂದ್ದಾರೆ ಬರಲೋಲು

ಒಪ್ಪಿನ ಸೊಂಟ ಚುಚ್ಚಲು ಬಾಯಿಬೀಗ
ಉಕ್ಕು ಹೊಳೆಯಲ್ಲಿರುವ ನಿಂಬೇ । ರಂಗಯ್ಯ
ಒಪ್ಪಿಕೊಳ್ಳೋ ಹರಕೆಯ ॥

ಹರಕೆಯ ಒಪ್ಪಿಸೋತೆ ದೊಡ್ಡೋರ ಮಗನೇನೇ
ನೀಸುತ್ತಿ ಬಾರೆ ಪೌಳಿಯ । ಬಾಗಿಲ್ಮುಂದೆ
ಹೊತ್ತು ಬಾರೆ ಹೊನ್ನ ಕಳಸಾನ॥

ಆಗಸದಿಂದ ಧೂಪದ ಹೊಗೆ ಬಂದೋ
ಆಕೆ ರಂಗಯ್ಯ ಗುಡಿ ಮುಂದೆ । ನೋಡಿದೆ
ಬೇಕಾದ ಬಾಳೆಯ ಗೊನೆ ಬಿಟ್ಯೋ॥

ಹಾಲು ಬಾನವ ಕೊಡು ಮ್ಯಾಲೆ ಭಾಗ್ಯವ ಕೊಡು
ಬಾಲಕರ ಕೊಡು ಮನೆತುಂಬ। ರಂಗಯ್ಯ
ಬಾಗೀಲ ರಜವ ಹೊಡೆದೇವು॥

ತುಪ್ಪಿ ಬಾನವ ಕೊಡು ಕಪ್ಪುಬಂಗಾರ ಕೊಡು
ಪುತ್ರರ ಕೊಡು ಮನೆತುಂಬ । ರಂಗಯ್ಯ
ಪೌಳಿಯ ರನವ ಹೊಡೆದೆವು॥

ಊರ ತೋರುಗಳೆಲ್ಲ ಊರ ಮುಂದೆ ಹರಿದಾರೆ
ದಲ್ಲಿಣಿಗಾರ ರಂಗಯ್ಯ । ನಿನ್ನ ತೇರು
ಬೆಲ್ಲದಂಗಡಿಗೆ ಹರಿದಾವು॥

ಊರ ತೇರುಗಳೆಲ್ಲ ಊರ ಮುಂದೆ ಹರದಾರೆ
ಗಾತಾಳಗಾರ ರಂಗಯ್ಯ । ನಿಂತೇರು
ದೂಪದಂಗಡಿಗೆ ಹರಿದಾವು॥

ತೇರು ಹರಿದಾವೆ ತಾನಕೆ ನಿಂದಾವೆ
ನೋಡೊ ಪರಿಷೆಲ್ಲ ಹರಿದಾಡಿ । ಹೋಗುವಾಗ
ತೇರಿಗಿಟ್ಟವರೆ ದವನವ॥

ಸಂದೇಯಾಯಿತು ಶಿವನ ಸಂಗಡೊಬ್ಬರಿಲ್ಲಾ
ನಮ್ಮ ತಂದೆಯ ಮನೆಸ್ವಾಮಿ । ರಂಗಯ್ಯ
ನಾನಿರುವೆ ಮಗಳೆ ನಡೆ ಮುಂದೆ ॥

ಅಪ್ಪ ರಂಗಯ್ಯನ ಕೆಪ್ಪೆ ಮೇಗಳ ನಾಮ
ಒಟ್ಟು ನೂಳೇಳೆ ತೆಗೆದಂಗೆ । ರಂಗಯ್ಯ
ನಿಂಕೆಪ್ಪೇ ಮ್ಯಾಗಳ ಹರಿನಾಮ॥

ಕಬ್ಬತ್ತಿ ಕರಿಗಾಗೆ ಕಬ್ಬಿಣ ಉಯ್ಯಾಲೆ
ಯಾರು ಕೂಗಿದರು ಮಲಕಾದು । ಕಬ್ಬತ್ತಿ
ರಂಗಯ್ಯನ ಹೆಂಡತಿ ಬಿಂದಿಗ್ಯಮ್ಮ॥

ಯಾರು ತೂಗಿದರು ಮುಲಕಾದು ಉಯ್ಯಾಲೆ
ರಂಗಯ್ಯನ ಹೆಂಡತಿ ಬಿಂದಿಗ್ಯಮ್ಮ । ಕೂಗಿದರೆ
ಕಲ್ಯಾಣದ ಗಮಟೆ ಘಳಿರೆಂದೋ॥

ವರ್ಷಕೊರ್ಷಕ್ಕೆ ಚಂದಾಕನೆ ಕಬ್ಬತ್ತಿ
ವರ್ಷದ ಪೂಜೆ ಘನಪೂಜೆ । ರಂಗಯ್ಯ
ಹಲಿಗೆಯ ಪೂಜೆ ಹಸನಾದೋ॥

ತಿಂಗುತಿಂಗಳಿಗೆ ಚಂದಕಾನೋ ಕಬ್ಬತ್ತಿ
ತಿಂಗಳ ಪೂಜೆ ಘನಪೂಜೆ । ರಂಗಯ್ಯ
ಗುರುಡಾನ ಪೂಜೆ ಘನಪಾದೋ

ಆಚೆಯ ಬೀದೀಲಿ ದೀಪದ ಬೆಳಕೇನು
ಆತ ರಂಗಯ್ಯ ಮದಲಿಂಗ । ನಾಗುವಾಗ
ತುಪ್ಪದ ದೀಪ ಘನವಾದೋ॥

ಆರತಿ ಹೊರಟಾವೆ ಕೀರುತಿ ಊಳ್ಯೋನಿಗೆ
ಕೇರಿಯ ಮೇಲೆ ಮೆರೆಯೋಗೆ । ರಂಗಯ್ಯಗೆ
ಆರತಿ ಐನೂರು ಹೊರಟಾವೇ॥

ಹೆಬ್ಬಾಗಿಲ ತುಂಬ ಅಬ್ಬಾರವೇನಿರೆ
ಒಬ್ಬ ತಂದೆಗೆ ಒಬ್ಬ ಮಗ ಹುಟ್ಟಿ ರಂಗಯ್ಯ
ಅಬ್ಬರದಿ ಗುಡಿಗೆ ಬರುತ್ತಾನೆ

ತಾಯಿ ಮನೆ ದೇವರಿಗೆ ತಾಳಿಯ ಮಾಡಿಸಿದೊ
ನಮ್ಮ ಮಾವನ ಮನೆ ಸ್ವಾಮೀ। ರಂಗಯ್ಯಗೆ
ಹೇಳಿ ಮಾಡಿಸಿದೋ ಪರಬಾಳೆ

ಹಸಿವಿಗೆ ಹಾಲು ಕಾಣೋ ಶಿಸುವಿಗೆ ಬೆಣ್ಣೆ ಕಾಯೋ
ಹುಟ್ಟಿದ ಮಕ್ಕಳಿಗೆ ನಿನ್ನ ಹೆಸರು । ರಂಗಯ್ಯ
ನೀ ಬಂದ ಬಪುರ ಹೊಡಕೋಳೋ ॥

ಕಷ್ಟಕ್ಕೆ ಆದವನೆ ನಿಷ್ಠುರ ಹೊತ್ತವಗೆ
ಬಂದ ಬಹುರವ ಬಯಲಾನೆ । ಮಾಡಿದಗೆ
ಪಾದಕ್ಕೆಟ್ಟೇವು ಇಡುಗಾಯಿ॥

ಇಡುಗಾಯಿ ಇಡಿಸೇವು ವಡಗಾಯ ವಡಿಸೇವೂ
ಎಳನೀರಿನ ಕೋಡಿ ಹರಿಸೋವು। ರಂಗಯ್ಯ
ನಿಮ ಕೋಣಿ ತುಂಬ ಕೊಡಿ ಹರಿಸೇವು॥

ಊರ ಮುಂದಿರುವವನೆ ಈರನ ಶೂರನೆ
ನೀರು ಗಂಧದ ಒಡೆಯಾನೆ। ರಂಗಯ್ಯಗೆ
ನೀರಿಕೋಗುತ್ತ ಕೈಯ ಮುಗಿದೇವು॥

ಊರ ಮಂದಿರುವೋನೆ ಉರಿಯೋ ಹಚ್ಚಡದೋನೆ
ಜಾಜಿನ ಹೂವಿನ ಜಡೆಯೋನೆ ರಂಗಯ್ಯ
ನಿನ್ನ ಕಾರಗದ್ದೆ ಗಿಣಿ ತಿಂದೋ॥

ಸ್ವಾಮಿ ರಂಗಯ್ಯಗೆ ಏನು ಎಂಜಲಾಗೋ
ಹಾಲೆಂಜಲಾದೋ ಕರುವುಂಡು। ರಂಗಯ್ಯಗೆ
ಹಣ್ಣೆಂಜರಾದೋ ಗಿಣಿ ತಿಂದು॥

ಹಣ್ಗೆಂಜಲಾದೋಗಿಳಿ ತಿಂದು ರಂಗಯ್ಯ। ಗಂಗೇಯ
ಹೂ ವೆಂಜಲಾದೋ ಹುಳು ಮುಟ್ಟಿ।
ನೀರೆಂಜರಾದೋ ಮಿಕಮುಟ್ಟಿ॥

ಊರ ಮುಂದಲ ಕೆರೆಗೆ ರಂಗ ಬಾಣದ ಬಿಟ್ಟು
ನೊಡುವ ಬನ್ನಿ ಜನರೆಲ್ಲಾ। ರಂಗಯ್ಯನ
ಜೋಡೇರಡು ಕುದುರೆ ಕುಣಿತಾವ॥

ಆದರಿಗಾರೆಲೆ ಖಾದರಿಗೆ ಮೂರೆಲೆ
ಮಾತು ಬಲ್ಲವಗೆ ಕಾವಳಿಗೇ। ರಂಗಯ್ಯ
ಸ್ವಾಮಿಗೆ ನೋಡಿ ಎಲೆ ಪೂಜೆ॥

ಹೋಗಿ ನೊಡಾನ ಬನ್ನಿ ಹೂವಿನ ಪೂಜೆಯ
ಸ್ವಾಮಿ ರಂಗಯ್ಯನ ಕದಲಿಯಾ ಪೂಜೆಯ
ಹೋಗಿ ನೋಡೋರಿಗೂ ಮನವಿಲ್ಲ॥

ಎದ್ದು ನೋಡಾನ ಬನ್ನಿ ಮಗ್ಗಿನ ಪೂಜೆಯ
ಮುದ್ದು ರಂಗಯ್ಯನ ಕದಲಿಯ। ಪೂಜೆಯ
ಎದ್ದು ನೋಡೋರಿಗೆ ಮನವಿಲ್ಲ॥

## ೨. ವಕ್ತೃಗಳ ವಿವರ

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಜಾತಿ | ವೃತ್ತಿ | ಗ್ರಾಮ |
|---|---|---|---|---|---|
| ೧. | ಪ್ರೊ. ಕೆ.ಆರ್.ಸುಶೀಲೆಗೌಡ | ೬೫ | ಒಕ್ಕಲಿಗ | ನಿವೃತ್ತ ಪ್ರಾಧ್ಯಾಪಕ | ವಿದ್ಯಾನಗರ |
| ೨. | ರಾಜೇಗೌಡ | ೭೦ | ಒಕ್ಕಲಿಗ | ವ್ಯವಸಾಯ | ಕಬ್ಬತ್ತಿಗ್ರಾಮ |
| ೩. | ರಾಮಶಾಸ್ತ್ರಿ | ೬೦ | ಬ್ರಾಹ್ಮಣ | ಅರ್ಚಕ | ಕಬ್ಬತ್ತಿಗ್ರಾಮ |
| ೪. | ನಂಜಯ್ಯ | ೭೫ | ಹರಿಜನ | ಕೂಲಿ | ಕಬ್ಬತ್ತಿಗ್ರಾಮ |
| ೫. | ಜವರಯ್ಯ | ೬೦ | ಹರಿಜನ | ಕೂಲಿ | ಚನ್ನಂಗಿನಹಳ್ಳಿಗ್ರಾಮ |
| ೬. | ಹನುಮೇಗೌಡ | ೫೦ | ಒಕ್ಕಲಿಗ | ವ್ಯವಸಾಯ | ಚನ್ನಂಗಿನಹಳ್ಳಿಗ್ರಾಮ |
| ೭. | ರಘುರಾಮ್ | ೫೦ | ಬ್ರಾಹ್ಮಣ | ಅರ್ಚಕ | ಕಬ್ಬತ್ತಿಗ್ರಾಮ |
| ೮. | ಸ್ವಾಮಿನಾಥ | ೪೦ | ನಯನಜ ಕ್ಷತ್ರಿಯ | ಕ್ಷೌರ | ಕಬ್ಬತ್ತಿಗ್ರಾಮ |
| ೯. | ರಾಮೇಗೌಡ | ೬೦ | ಒಕ್ಕಲಿಗ | ಕೂಲಿ | ಕಬ್ಬತ್ತಿಗ್ರಾಮ |
| ೧೦. | ರಾಮಣ್ಣ | ೫೦ | ಹರಿಜನ | ವ್ಯವಸಾಯ | ಚನ್ನಂಗಿನಹಳ್ಳಿ |
| ೧೧. | ಜವರಪ್ಪ | ೪೦ | ಮಡಿವಾಳರು | ಡೋಬಿ | ಕಬ್ಬತ್ತಿಗ್ರಾಮ |
| ೧೨. | ರಂಗಯ್ಯ | ೬೦ | ಹರಿಜನ | ಕೂಡಿ | ಕಬ್ಬತ್ತಿಗ್ರಾಮ |
| ೧೩. | ರಂಗೇಗೌಡ | ೭೦ | ಒಕ್ಕಲಿಗ | ವ್ಯವಸಾಯ | ಕಬ್ಬತ್ತಿಗ್ರಾಮ |
| ೧೪. | ರಂಗಯ್ಯ | ೫೦ | ಹರಿಜನ | ವ್ಯವಸಾಯ | ಅಂಕಪುರಗ್ರಾಮ |
| ೧೫. | ಲಕ್ಷ್ಮಮ್ಮ | ೬೦ | ಒಕ್ಕಲಿಗ | ಮನೆಕೆಲಸ | ಕಾರ್ಲೆ ಗ್ರಾಮ |
| ೧೬. | ಹುಚ್ಚಮ್ಮ | ೮೦ | ಒಕ್ಕಲಿಗ | ಮನೆಕೆಲಸ | ಕಾರ್ಲೆ ಗ್ರಾಮ |
| ೧೭. | ರಂಗಮ್ಮ | ೬೦ | ಒಕ್ಕಲಿಗ | ಮನೆಕೆಲಸ | ಕಬ್ಬತ್ತಿಗ್ರಾಮ |
| ೧೮. | ಈರಯ್ಯ | ೭೦ | ಹರಿಜನ | ಕೂಲಿ | ಕಾರೋಗ್ರಾಮ |
| ೧೯. | ಲಕ್ಷ್ಮೀ | ೪೦ | ಒಕ್ಕಲಿಗ | ಮನೆಕೆಲಸ | ಕಬ್ಬತ್ತಿಗ್ರಾಮ |

## ೩. ಆಕರ ಗ್ರಂಥಗಳು


೧. ಅರವಿಂದ ಮಾಲಗತ್ತಿ – ಜಾನಪದ ಶೋಧ
ಶೈಲ ಪ್ರಕಾಶನ
ಅಂಬೇಡ್ಕರ್ ರಸ್ತೆ, ಮುದ್ದೆ ಬಿಹಾಳ, ೧೯೯೦

೨. ಅರ್ಜುನ ಯು ಗೊಳಸಂಗಿ – ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ
ಅಧ್ಯಯನ, ಮಲ್ಲಿಕಾರ್ಜುನ ಪ್ರಕಾಶನ
ಗೊಳಸಂಗಿ, ೧೯೯೫

೩. ಕಲ್ಬುರ್ಗಿ ಎಂ.ಎಂ. – ಕರ್ನಾಟಕದ ಕೈಫಿಯತ್ತುಗಳು
ಪ್ರಸಾರಾಂಗ – ಕನ್ನಡ ವಿಶ್ವವಿದ್ಯಾನಿಲಯ,
ಹಂಪಿ, ೧೯೯೪

೪. ಕರೀಂಖಾನ್.ಎಸ್.ಕೆ(ಸಂ) – ಕನ್ನಡ ಜಾನಪದ ಗೀತೆಗಳು
ಪುಸ್ತಕಾಲಯ ಪ್ರಕಾಶನ
ಮೈಸೂರು – ೧೯೭೬

೫. ಕಾಳೇಗೌಡ ನಾಗವಾರ(ಸಂ.) – ಬೀದಿಮಕ್ಕಳು ಬೆಳೆದೋ
ಪ್ರಸರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ,
೧೯೭೭.

೬. ಕೃಷ್ಣಮೂರ್ತಿ ಮತ್ತಿಘಟ್ಟ(ಸಂ.)– ಕನ್ನಡ ಜಾನಪದ ಸಾಹಿತ್ಯ ಭಂಡಾರ
ಗುರುಮೂರ್ತಿ ಪ್ರಕಾಶನ

೭. ಗೊರೂರು ರಾಮಸ್ವಾಮಿ ಅಯ್ಯಂಗಾರ್(ಸಂ.) – ಹಳ್ಳಿಹಾಡುಗಳು
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೦

೮. ಚನ್ನಣ್ಣ ವಾಲೀಕರ – ಒಂದು ಗ್ರಾಮದ ಜಾನಪದೀಯ ಅಧ್ಯಯನ
ಅಕ್ಷರ ಪ್ರಕಾಶನ
ಹೆಗ್ಗೋಡು, ೧೯೯೧

೯. ವಾಗೀಶ್ವರಿ ಶಾಸ್ತ್ರೀ – ಕರ್ನಾಟಕದ ಹಬ್ಬಗಳು
ಐ.ಬಿ.ಎಚ್. ಪ್ರಕಾಶನ
ಬೆಂಗಳೂರು, ೧೯೮೩

೧೦. ಚೆಲುವೇಗೌಡ – ಕೆಲವು ಜನಪದ ಸಂಪ್ರದಾಯಗಳು
ತಳಗವಾಡಿ ಪ್ರಕಾಶನ
ಮೈಸೂರು, ೧೯೭೮

೧೧. ತಿಪ್ಪೇರುದ್ರಸ್ವಾಮಿ.ಎಚ್. – ಕರ್ನಾಟಕ ಸಂಸ್ಕೃತಿ ಸಮೀಕ್ಷೆ
ಡಿ.ವಿ.ಕೆ.ಮೂರ್ತಿ ಪ್ರಕಾಶನ
ಕೃಷ್ಣಮೂರ್ತಿಪುರಂ, ಮೈಸೂರು, ೧೯೯೭
(ಮೂರನೇ ಮುದ್ರಣ)

೧೨. ನಲ್ಲೂರ್ ಪ್ರಸಾದ್ ಗಂಗಡಿಕಾರ ಒಕ್ಕಲಿಗರು
ಅಪ್ರದೀನ ಪ್ರಕಾಶನ
ಬೆಂಗಳೂರು –೨೦೦೧

೧೩. ಮಳಲಿ ವಸಂತಕುಮಾರ (ಸಂ.) ಮಳಲಿ ಗಿಡ್ಡಮ್ಮ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ೧೯೯೭

೧೪. ರಾಮಚಂದ್ರೇಗೌಡ.ಹಿ.ಶಿ.(ಸಂ) ಹಾಸನಜಿಲ್ಲೆಯ ಜಾನಪದ ಕಥೆಗಳ ಸಂಗ್ರಹ
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು, ೧೯೮೦

೧೫. ರಾಮಚಂದ್ರೇಗೌಡ.ಹಿ.ಶಿ.(ಸಂ.) ಜಾನಪದ ಸಾಂಸ್ಕೃತಿಕ ಆಯಾಮಗಳು
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು, ೧೯೯೮

೧೬. ಸೂರ್ಯನಾರಾಯಣ ಯು.ಕಾಮತ್ ಕರ್ನಾಟಕ ಗೆಝಟಿಯರ್ ಸಂ. ಮೂರು,
೧೯೮೬

೧೭. ಸುಶೀಲೆಗೌಡ ಕೆ.ಆರ್.

****



శ్రీ రంగనాధస్వామి దేవస్థానం.



శ్రీ రంగనాధస్వామివారి గర్భగుడి.



ನಿರ್ಮಾಣದ ಹಂತದಲ್ಲಿರುವ ಲಕ್ಷ್ಮೀದೇವಿ ದೇವಸ್ಥಾನ.



ಉತ್ಸವ ಮೂರ್ತಿ ಶ್ರೀ ರಂಗನಾಥ ಸ್ವಾಮಿ.



ಶ್ರೀ ರಂಗನಾಥ ಸ್ವಾಮಿ ಬೆಟ್ಟ.

